

ಕನಸುಗಳಿಗೆ ರೆಕ್ಕೆಪುಕ್ಕ ಹಚ್ಚಿ
ಕತ್ತಲಾಚೆಯ ಬೆಳಕ ತೋರಿದ ಅಮ್ಮಾ
ನಿನ್ನೆಡೆಗೆ ಜಿಗಿ ಜಿಗಿದು.........

# ನಮ್ಮ ಮಾನಸ

ಸಂಪುಟ: 4 ಮೇ 2010 ಸಂಚಿಕೆ : 1

# ಕರ್ನಾಟಕ ಉತ್ಕೃಷ್ಟ ಕಲೆ, ಸಾಹಿತ್ಯ, ಸಂಸ್ಕೃತಿ......ಗಳ ಬೀಡು



ಸಾವಿರಾರು ವರ್ಷಗಳ ಶ್ರೇಷ್ಠ ಸಂಸ್ಕೃತಿ, ಶ್ರೀಮಂತ ಕಲೆ, ಅನುಪಮ ಸಾಹಿತ್ಯ ಭಂಡಾರ ಹೊಂದಿರುವ ಕರ್ನಾಟಕದ ವೈಭವವನ್ನು ದೇಶದ ಉದ್ದಗಲಕ್ಕೂ ಮೆರೆಸಿದ ಹಿರಿಮೆ ಕನ್ನಡಿಗರದು. ಸಾಮಾಜಿಕ ಸಮಾನತೆ, ಹೃದಯ ವೈಶಾಲ್ಯತೆಯ ಮೂಲ ಸೆಲೆಯಲ್ಲಿ ಮೂಡಿಬಂದ ಈ ನಾಡಿನ ವಚನ ಸಾಹಿತ್ಯ ಮತ್ತು ದಾಸ ಸಾಹಿತ್ಯಗಳು ಸದಾ ಪ್ರಸ್ತುತ. ಅವು ಮನುಕುಲಕ್ಕೆ ನೀಡಿದ ಅಭೂತಪೂರ್ವ ಕೊಡುಗೆಗಳು.

ದೇಶದ ಕಲೆ, ಸಾಹಿತ್ಯ, ಕ್ರೀಡೆ, ವಿಜ್ಞಾನ, ತಂತ್ರಜ್ಞಾನಗಳಂತಹ ಮಹತ್ತರ ರಂಗಗಳಲ್ಲಿ ಮಹೋನ್ನತ ಕಾಣಿಕೆ ನೀಡಿದ ಕರ್ನಾಟಕವನ್ನು ಮತ್ತಷ್ಟು ಸಮೃದ್ಧ ಗೊಳಿಸಬೇಕೆಂಬುದೇ ಸರ್ಕಾರದ ದೃಢ ಸಂಕಲ್ಪ. ಪ್ರಾದೇಶಿಕ ಅಸಮತೋಲನ ನಿವಾರಣೆಗೆ ಒತ್ತು ನೀಡಿರುವ ಸರ್ಕಾರ ಉತ್ತರ ಕರ್ನಾಟಕದ ಸರ್ವಾಂಗೀಣ ಅಭಿವೃದ್ಧಿಗೆ ಪ್ರಾಶಸ್ತ್ಯ ನೀಡಿ ಕಾರ್ಯಪ್ರವೃತ್ತವಾಗಿದೆ.



ಕರ್ನಾಟಕ ವಾರ್ತೆ

# ನಮ್ಮ ಮಾನಸ

ಮೇ 2010

ಸಂಪುಟ : 4 ಸಂಚಿಕೆ : 1

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*

*ಸಂಪಾದಕ ಮಂಡಳಿ*
**ಚಂಪಾವತಿ ಹೆಚ್.ಎಸ್., ಸವಿತಾ ಎ.**
**ವೆಂ. ವನಜಾ, ಗೀತಾ, ಎಚ್.ಎಸ್. ಪುಷ್ಪಾ.**

*ಸಲಹೆ – ಸಹಕಾರ*
**ಇಳಾ ವಿಜಯಾ, ಸುಮಿತ್ರಾಬಾಯಿ ಬಿ.ಎನ್.**

*ಮಾನಸ ಬಳಗ*
**ತಸ್ಲೀಂ ತಾಜ್, ವೇದವಲ್ಲಿ ಜಿ.ವಿ.**
**ವತ್ಸಲ ವೈ.ಎನ್., ಶ್ಯಾಮಲ, ತಾಜುಮಾ**

*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ | 100–00 ರೂ. |
| (ವಿಶೇಷ ಸಂಚಿಕೆಯೊಂದಿಗೆ) | |
| ಸಂಸ್ಥೆಗಳಿಗೆ | 150–00 ರೂ. |

## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

***ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ***

**ವೆಂ. ವನಜ**

*2329, 12ನೇ ಮೈನ್, 2ನೇ ಹಂತ,*
*ವಿಜಯನಗರ, ಮೈಸೂರು – 570 017*

**ಪ್ರಾರಂಭ : 'ಮಾನುಷಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**




ಸಂಪಾದಕೀಯ

# ಲೈಂಗಿಕ ದೌರ್ಜನ್ಯ ಕಾಯಿದೆ - 2010; ಮಹಿಳಾ ಗುಂಪುಗಳ ಹಕ್ಕೊತ್ತಾಯ

ಲೈಂಗಿಕ ದೌರ್ಜನ್ಯ ಕಾಯಿದೆ 2010ನ್ನು ಈಗಾಗಲೇ ಕರಡು ರೂಪದಲ್ಲಿ ತಯಾರಿಸಲಾಗಿದೆ. ಈ ಕುರಿತು ಈಗಾಗಲೇ ಮಹಿಳಾ ಚಳವಳಿಯಲ್ಲಿ ಚರ್ಚೆಗಳು ನಡೆಯತೊಡಗಿವೆ. 'ಫೋರಂ ಎಗೆನೆಸ್ಟ್ ಅಪ್ರೆಶನ್ ಆಫ್ ವಿಮೆನ್' ಬಾಂಬೆಯ ಮಹಿಳಾ ಗುಂಪಿನವರು ರಾಷ್ಟ್ರೀಯ ಮಟ್ಟದ ಹಲವಾರು ಮಹಿಳಾ ಗುಂಪುಗಳೊಡಗೂಡಿ ಒಂದು ಸುದೀರ್ಘವಾದ ಚರ್ಚೆಯನ್ನು ಮಾಡಿದ್ದಾರೆ. ಮಹಿಳಾ ಪರವಾಗಿರುವ ಕಾನೂನುಗಳು ಜಾರಿಗೆ ಬರುವಲ್ಲಿ ಚಾರಿತ್ರಿಕವಾಗಿ ಮಹಿಳಾ ಚಳವಳಿಯ ಕೊಡುಗೆ ಗಮನೀಯವಾದದ್ದು. ವೈಯಕ್ತಿಕ ಹಾಗೂ ರಾಜ್ಯಪ್ರಭುತ್ವದ ಹಿಂಸೆಗಳು ಬೇರೆ ಬೇರೆ ರೂಪದಲ್ಲಿ ಮಹಿಳೆಯರ ಬದುಕನ್ನು ನಾಶಮಾಡುತ್ತಿವೆ. ಇಂದಿನ ಜಾಗತೀಕರಣದ ಸಂದರ್ಭದಲ್ಲಿ ಲೈಂಗಿಕ ದೌರ್ಜನ್ಯ ಕಾಯಿದೆಗಳು ವಿಸ್ತಾರವಾದ ರೀತಿಯಲ್ಲಿ, ಮಹಿಳೆಯರಿಗೆ ಹಿಂಸೆಯನ್ನು ಸಶಕ್ತವಾಗಿ ಎದುರಿಸಲು ಸಹಾಯಕವಾಗುವಂತೆ ಹಾಗೂ ಅವರಿಗೆ ನ್ಯಾಯ ದೊರೆಯಬೇಕೆಂಬ ದೃಷ್ಟಿಯಿಂದ ಕಾನೂನು, ಕರಡು ಪ್ರತಿಯ ಸುಧಾರಣೆ ಕುರಿತು ಚರ್ಚೆ ನಡೆಯುತ್ತಿರುವುದು ಗಮನಾರ್ಹವಾದ ಸಂಗತಿಯಾಗಿದೆ.

ರಾಜ್ಯ ಪ್ರಭುತ್ವ, ಪ್ರಭುತ್ವದ ಅಂಗಗಳಾದ ಪೊಲೀಸ್, ಮಿಲಿಟರಿ ಇವುಗಳಿಗೆ ಸಂಬಂಧಿಸಿದ ಹಾಗೆ ಹಾಗೂ ಗಲಭೆ, ಘರ್ಷಣೆಯ ಪ್ರದೇಶಗಳಲ್ಲಿ ನಡೆಯುತ್ತಿರುವ ಲೈಂಗಿಕ ದೌರ್ಜನ್ಯ ಕುರಿತು ಮಂಡಿಸಬೇಕಾದ ಬೇಡಿಕೆಗಳು ಮತ್ತು ಬದಲಾವಣೆಗಾಗಿ ಹಲವಾರು ಕಮ್ಮಟಗಳನ್ನು ಮಹಿಳಾಗುಂಪುಗಳು ಹಮ್ಮಿಕೊಳ್ಳತೊಡಗಿರುವುದು ಸ್ವಾಗತಾರ್ಹವಾದ ವಿಚಾರವಾಗಿದೆ.

2010ರ ಕರಡಿನಲ್ಲಿ ಲೈಂಗಿಕ ದೌರ್ಜನ್ಯದ ವ್ಯಾಖ್ಯಾನವನ್ನು ಕೇವಲ ಒತ್ತಾಯದ ಸಂಭೋಗಕ್ಕೆ ಮಾತ್ರ ಸೀಮಿತಗೊಳಿಸಿಲ್ಲ. ದೌರ್ಜನ್ಯದ ವ್ಯಾಖ್ಯಾನವನ್ನು ಯಾವುದೇ ಪರಕೀಯ ವಸ್ತು ಅಥವಾ ಶಿಶ್ನವನ್ನು ಬಾಯಿ, ಯೋನಿ, ಗುದದ್ವಾರದಲ್ಲಿ ತುರುಕುವುದು ಎಂಬರ್ಥದಲ್ಲಿ ವಿಸ್ತರಿಸಲಾಗಿದೆ. ಮಹಿಳಾ ಗುಂಪುಗಳು ಈ ವ್ಯಾಖ್ಯಾನ ಇನ್ನಷ್ಟು ವಿಸ್ತರಣೆಗೊಳ್ಳಬೇಕೆಂದು ಬಯಸುತ್ತವೆ. ಹೆಂಗಸಿನ ಬಟ್ಟೆ ಬಿಚ್ಚುವುದು, ಬೆತ್ತಲೆಯಾಗಿ ಮೆರವಣಿಗೆ ಮಾಡುವುದು, ಮೊಲೆ ಇತ್ಯಾದಿ ಭಾಗವನ್ನು ಕತ್ತರಿಸುವುದು, ಸುಡುವುದು, ಅನುಚಿತ ಲೈಂಗಿಕ ಭಾಷೆ ಬಳಸುವುದು, ಅಸಹ್ಯಕರ ಸೌಂಜ್ಞೆಗಳೂ ಸಹ ಲೈಂಗಿಕ ದೌರ್ಜನ್ಯದ ವ್ಯಾಖ್ಯಾನದಲ್ಲಿ ಬರಬೇಕೆಂದು ಮಹಿಳಾಗುಂಪುಗಳು ಒತ್ತಾಯಿಸುತ್ತವೆ. ಶಿಕ್ಷೆಯ ಪ್ರಮಾಣವನ್ನು ಕೂಡಾ ಭಿನ್ನ ಭಿನ್ನ ರೀತಿಯಲ್ಲಿ ನಿಗದಿಪಡಿಸಬೇಕೆಂಬುದು ಮಹಿಳಾಗುಂಪುಗಳ ಅಭಿಮತ.

ಲೈಂಗಿಕ ದೌರ್ಜನ್ಯ ಎಂದು ಮಾನ್ಯವಾಗುವುದು ಆಕೆಯ ಇಚ್ಛೆಯ ವಿರುದ್ಧವಾಗಿ ನಡೆದಾಗ ಹಾಗೂ ಆಕೆಯ ಒಪ್ಪಿಗೆ ಇಲ್ಲದಾಗ ಎಂದು ಕರಡುಪ್ರತಿ ಸೂಚಿಸುತ್ತದೆ. ಗಲಭೆ, ಘರ್ಷಣೆಯ ಪ್ರದೇಶಗಳಲ್ಲಿ ಹೆಂಗಸು ದೌರ್ಜನ್ಯದ ಬಗ್ಗೆ ಫಿರ್ಯಾದು ನೀಡಿದಾಗ ಅಲ್ಲಿ ಒಪ್ಪಿಗೆಯ ಪ್ರಶ್ನೆ ಕುರಿತು ತನಿಖೆ ಮಾಡಬೇಕು.

ಪೊಲೀಸ್ ಅಧಿಕಾರಿಯ ವ್ಯಾಪ್ತಿಯಲ್ಲಿ ನಡೆಯುವ ಲೈಂಗಿಕ ದೌರ್ಜನ್ಯದ ಅಡಿಯಲ್ಲಿ ವಿಶೇಷ ಪೊಲೀಸ್ ಅಧಿಕಾರಿಗಳನ್ನೂ ದಂಗೆ, ಘರ್ಷಣೆಯ ಪ್ರದೇಶಗಳಲ್ಲಿ ಸೇರಿಸಬೇಕು. ಸೈನಿಕರು, ಪ್ಯಾರಾಮಿಲಿಟರಿ ಪಡೆಗಳಿಂದ ಮಹಿಳೆಯರ ಮೇಲೆ ಲೈಂಗಿಕ ದೌರ್ಜನ್ಯ ನಡೆಯುತ್ತಿರುವುದರಿಂದ ಇದನ್ನು ಪೊಲೀಸ್ ವ್ಯಾಪ್ತಿಯೊಳಗಿನ ವ್ಯಾಖ್ಯಾನದೊಳಗೇ ತರಬೇಕು ಎಂದು ಮಹಿಳಾಗುಂಪುಗಳು ಒತ್ತಾಯಿಸುತ್ತವೆ.

ಹಲವು ಪ್ರಕರಣಗಳಲ್ಲಿ ಪೊಲೀಸರು ಹೆಂಗಸರನ್ನು ಕಸ್ಟಡಿಗೆ ತೆಗೆದುಕೊಂಡು ಹೋಗಿರುವುದು ದಾಖಲಾಗಿರುವುದೇ ಇಲ್ಲ. ಇಂಥ ಕೃತ್ಯಗಳು ಮತ್ತು ಪೊಲೀಸ್ ಅಧಿಕಾರಿಯ

ಗತ್ತು, ಅಧಿಕಾರ ಮುಖ್ಯವಾಗಿ ಕಸ್ಟಡಿಯಲ್ಲಿ, ಲೈಂಗಿಕ ದೌರ್ಜನ್ಯ ಠಾಣೆಯ ಆಚೆಯೂ ಕೂಡಾ ನಡೆಯಬಹುದಾಗಿದೆ. ಹಾಗಾಗಿ 'ಕಸ್ಟಡಿ' ಕುರಿತ ವ್ಯಾಖ್ಯಾನವನ್ನೂ ವಿಸ್ತರಿಸುವುದು ಅಗತ್ಯ.

ವಿವಾಹದೊಳಗಿನ ಲೈಂಗಿಕದೌರ್ಜನ್ಯವನ್ನು ಗುರುತಿಸುವುದು ಮುಖ್ಯ. ಕರಡಿನಲ್ಲಿ 18 ವರ್ಷದ ಮೇಲ್ಪಟ್ಟವರ ಮೇಲೆ ನಡೆಯುವ ಹಿಂಸೆಯನ್ನು ಬಿಟ್ಟುಬಿಡಲಾಗಿದೆ. ಆದರೆ ಇದನ್ನೂ ಗುರುತಿಸುವುದು ಮುಖ್ಯ ಎಂಬುದು ಮಹಿಳಾಗುಂಪುಗಳ ಒತ್ತಾಯವಾಗಿದೆ.

ಲೈಂಗಿಕದೌರ್ಜನ್ಯದಲ್ಲಿರುವ ಒಪ್ಪಿಗೆಯ ಪ್ರಶ್ನೆಯ ಬಗ್ಗೆ ಕರಡುಪ್ರತಿಯಲ್ಲಿ ದೀರ್ಘವಾಗಿ ಚರ್ಚಿಸಲಾಗಿದೆ. ಒಪ್ಪಿಗೆಯ ಪ್ರಶ್ನೆಯನ್ನು ಆಕೆಯ ಹಿಂದಿನ ಬದುಕಿನ ವಿವರಗಳಿಂದಾಗಲೀ, ಬೇರೆ ಲೈಂಗಿಕ ಸಂಬಂಧಗಳಲ್ಲಿ ಒಪ್ಪಿಗೆ ನೀಡಿದ್ದಕ್ಕಾಗಲೀ ಅಥವಾ ಭಯದಿಂದ ಒಪ್ಪಿಗೆ ಕೊಟ್ಟುದಕ್ಕಾಗಲೀ ಮಾನ್ಯತೆ ನೀಡಬಾರದು. ಅಥವಾ ದೌರ್ಜನ್ಯ ನಡೆಯುವ ಸಂದರ್ಭದಲ್ಲಿ ಗರ್ಭ ನಿರೋಧಕ ಕೇಳಿದಳೆಂಬುದನ್ನು ಒಪ್ಪಿಗೆಯ ಸೂಚಕವಾಗಿ ತೆಗೆದುಕೊಳ್ಳಬಾರದೆಂದು ಮಹಿಳಾಗುಂಪುಗಳು ಒತ್ತಾಯಿಸುತ್ತವೆ. ಸೆಡ್ಯೂಸ್, ಇಂಡ್ಯೂಸ್ ಇಂತಹ ಹಲವಾರು ಪದಗಳ ಬಳಕೆಯ ಬಗ್ಗೆ ಕೂಡಾ ಮಹಿಳಾಗುಂಪುಗಳು ತಮ್ಮ ವಿರೋಧ ವ್ಯಕ್ತಪಡಿಸುತ್ತವೆ. 'ಒಪ್ಪಿಗೆ'ಯ ವಯಸ್ಸನ್ನು 18 ರಿಂದ 16 ವರ್ಷಕ್ಕೆ ಇಳಿಸುವುದು ಇಂದಿನ ಸಂದರ್ಭದಲ್ಲಿ ಅಗತ್ಯ ಎಂದು ಮಹಿಳಾಗುಂಪುಗಳು ವಾದಿಸುತ್ತವೆ.

ಈ ಕರಡು ಪ್ರತಿಗೆ ಪ್ರಾರಂಭದಲ್ಲಿ ಒಂದು ಪರಿಚಯಾತ್ಮಕ ಲೇಖನ ಸೇರಿಸುವುದು ಮುಖ್ಯ. ಈ ಲೇಖನದಲ್ಲಿ ಲೈಂಗಿಕದೌರ್ಜನ್ಯ ಹೆಂಗಸಿನ ದೇಹ ಹಾಗೂ ಆಕೆಯ ಸ್ಪೇಸನ್ನು ಹೇಗೆ ಧಿಕ್ಕರಿಸುತ್ತವೆ ಎಂಬ ಒಂದು ತಾತ್ವಿಕ ಚೌಕಟ್ಟಿನೊಳಗೆ ಚರ್ಚಿಸಿ, ವಿಸ್ತರಿಸುವುದು ಅಗತ್ಯ. ಅನುಚಿತ ಭಾಷೆಯ ಮೂಲಕ ನಡೆಸುವಂತಹ ಲೈಂಗಿಕ ದೌರ್ಜನ್ಯಗಳನ್ನು ಬೇಲ್ ಸಿಗದಂತಹ ಅಪರಾಧಗಳು ಎಂದು ಪರಿಗಣಿಸುವುದು ಮುಖ್ಯ.

ಸಮಾನ ಲಿಂಗಿಗಳ ನಡುವಿನ ಲೈಂಗಿಕ ದೌರ್ಜನ್ಯ – ಪಿತೃಪ್ರಧಾನ ವ್ಯವಸ್ಥೆಯಲ್ಲಿ ಹೆಂಗಸಿನ ಮೇಲೆ ನಡೆಯುವ ದೌರ್ಜನ್ಯ, ಹಿಂಸೆಗಳು ಬೇರೆ ಬೇರೆ ರೂಪದಲ್ಲಿ ಇರುವುದರಿಂದ, ಸಮಾನ ಲಿಂಗಿಗಳ ನಡುವಿನ ಹಿಂಸೆಯ ಕುರಿತು ಕ್ವೀರ್ ಚಳವಳಿ (ಮೂರನೇ ಲಿಂಗಗಳು) ಚರ್ಚೆ ನಡೆಸಿ, ಸುಧಾರಣೆಗಾಗಿ ಬೇಡಿಕೆಗಳನ್ನು ಇಡುವುದು ಅಗತ್ಯವಾಗಿದೆ. ಕ್ವೀರ್ ಜನರಿಗೆ ಬೇಕಾಗುವ ರಕ್ಷಣಾ ಕಾನೂನುಗಳ ಬಗ್ಗೆ ಕೂಡಾ ಅವರು ಮಾತನಾಡುವುದು ಅಗತ್ಯವಾಗಿದೆ ಎಂದು ಮಹಿಳಾಚಳವಳಿ ಭಾವಿಸುತ್ತದೆ.

ಹಳೆಯ ಪ್ರಕರಣಗಳಲ್ಲಿ ಇರುವ ತಪ್ಪುಗಳು ಬೆಳಕಿಗೆ ಬಂದಿದ್ದರೆ, ಪಾಸಿಟೀವ್ ಪ್ರಕರಣಗಳಿದ್ದರೆ ಅಂತಹವುಗಳನ್ನು ಕರಡಿನಲ್ಲಿ ಸೇರಿಸಬೇಕು. ಗಲಭೆ, ದಂಗೆ ಪ್ರದೇಶಗಳಲ್ಲಿ ಇಂದು ಎಲ್ಲಾ 'ರಕ್ಷಣಾ' ಸಂಸ್ಥೆಗಳೂ ನಾಶವಾಗಿವೆ. ಇಂತಹ ಕಡೆ ಹಿಂಸೆ ನಡೆದಾಗ ಯಾರ ಹತ್ತಿರ ಹೋಗಬೇಕು, ಯಾವ ಕಾನೂನು, ಯಾವ ರೀತಿಯ ಹೇಳಿಕೆ ನೀಡಬೇಕು ಎಂಬುದರ ಬಗ್ಗೆ ಚರ್ಚಿಸುವುದು ಅತ್ಯಂತ ಜರೂರಿಯದ್ದಾಗಿದೆ. ವೈದ್ಯಕೀಯ ಸಾಕ್ಷಿ ಸಿಗದಿದ್ದರೆ ಅವರಿಗೆ ಯಾವ ಪರ್ಯಾಯವಿದೆ ಎಂಬುದನ್ನು ಕಾನೂನಿನ ಪರಿಧಿಯಲ್ಲಿ ಚರ್ಚಿಸುವ ಅಗತ್ಯವಿದೆ. ಇಂಥ ಅನೇಕ ಇಂದಿನ ಸಂದರ್ಭದ ಹಿಂಸೆಯನ್ನು, ಅದರ ವಿವಿಧ ಮಜಲುಗಳನ್ನು ಸವಾಲಾಗಿ ಸ್ವೀಕರಿಸುತ್ತಿರುವ ಮಹಿಳಾ ಚಳವಳಿ 2010ರ ಲೈಂಗಿಕ ದೌಜ್ಯನ್ಯ ಕಾನೂನಿನಲ್ಲಿ ಹಲವಾರು ಸುಧಾರಣೆಗಳಿಗಾಗಿ ಬೇಡಿಕೆಗಳನ್ನು ಇಟ್ಟಿದೆ.

ಹಿಂಸೆಯನ್ನು ಅನುಭವಿಸಿದ, ಅನುಭವಿಸುತ್ತಿರುವ ಹಲವಾರು ಹೆಣ್ಣುಮಕ್ಕಳನ್ನು ಚರ್ಚೆಯ ಕಮ್ಮಟಗಳು ಒಳಗೊಳ್ಳಬೇಕಾಗಿದೆ. ಅತ್ಯಂತ ಸಾಧಾರಣ ಮಹಿಳೆ ಕೂಡಾ ಯಾವುದೋ ಬಗೆಯ ಹಿಂಸೆಯನ್ನು ಅನುಭವಿಸಿರುತ್ತಾಳೆ. ಅವರನ್ನೂ ಒಳಗೊಂಡಂತೆ ನಡೆಯುವ ಚರ್ಚೆ ಕಾನೂನನ್ನು ಆಶಯದಾಯಕ ದಿಕ್ಕಿನತ್ತ ನಡೆಸುವಲ್ಲಿ ಶಕ್ತಿದಾಯಕವಾಗಿರುತ್ತದೆ. ಹಲವಾರು ಬೇಡಿಕೆಗಳಿಗೆ, ಬದಲಾವಣೆಗೆ ಒತ್ತಾಯಿಸುವ ಮೂಲಕ ಮಹಿಳೆಯರ ಮೇಲೆ ನಡೆಯುತ್ತಿರುವ ಲೈಂಗಿಕದೌರ್ಜನ್ಯದ ಸವಾಲುಗಳನ್ನು ಕಾನೂನಿನ ಚೌಕಟ್ಟಿನಲ್ಲಿ ಎದುರಿಸಲು ಎಲ್ಲ ಮಹಿಳೆಯರ ಸಂಘಟನಾತ್ಮಕ ಕರೆ, ಕೊಡುಗೆ ಅತ್ಯಂತ ಮಹತ್ವದ್ದೂ, ಅತ್ಯಗತ್ಯವಾದ್ದೂ ಆಗಿದೆ ಎಂದು ಮಾನಸಬಳಗ ಭಾವಿಸುತ್ತದೆ.

* * *

ರಂಗಭೂಮಿಯ ಪ್ರಸಿದ್ಧ ಕಲಾವಿದೆ ಬಿ. ಜಯಶ್ರೀ ಅವರು ರಾಜ್ಯಸಭಾ ಸಂಸದೆ. ದೆಹಲಿಯಲ್ಲಿ ಕರ್ನಾಟಕದ ಸಂಸ್ಕೃತಿಯನ್ನು, ಮಹಿಳೆಯನ್ನು ಪ್ರತಿನಿಧಿಸುತ್ತಿದ್ದಾರೆ. ಸಂತೋಷದ ಸಂಗತಿ. ಈ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು ಕನ್ನಡನುಡಿಯ ಸೇವೆಗಾಗಿ ಶ್ರಮಿಸುತ್ತಿರುವ ಹಿರಿಯರಾದ ಶಶಿಕಲಾ ಮೋಳ್ಡಿ ಅವರಿಗೆ ಸಂದಿದೆ. ಇವರಿಬ್ಬರಿಗೂ ಮಾನಸದ ಅಭಿನಂದನೆಗಳು. ❑

ಒಳಗಿನ ಪುಟಗಳಲ್ಲಿ....



ಮುಖಪುಟ ಕೃಪೆ: ಅದ್ವೈತ ಜಿ.



# ಕರ್ನಾಟಕದಲ್ಲಿ ಹಿಂಸೆಗೊಳಗಾದ ಮಹಿಳೆಯರಿಗಾಗಿ ಸರ್ಕಾರಿ ಸೇವೆಗಳು: ಒಂದು ಅಧ್ಯಯನ

• ಇಂದು ಸುಬ್ರಮಣ್ಯಂ, ಬಿ.ಎನ್.ಉಷಾ
(ಹೆಂಗಸರ ಹಕ್ಕಿನ ಸಂಘ ಬೆಂಗಳೂರು)

ಹೆಂಗಸರ ಹಕ್ಕಿನ ಸಂಘದ (HHS) ನಮ್ಮ ಕೆಲಸದ ಪ್ರಕ್ರಿಯೆಯಲ್ಲಿ, ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿರುವ ಮಹಿಳಾ ಒಕ್ಕೂಟಗಳು ಮತ್ತು ವಕೀಲರುಗಳೊಂದಿಗೆ ಕೆಲಸ ಮಾಡುವಾಗ ಹಿಂಸೆಯನ್ನು ಎದುರಿಸುತ್ತಿರುವ ಮಹಿಳೆಯರಿಗಾಗಿ ಸರ್ಕಾರವು ಪ್ರಾರಂಭ ಮಾಡಿರುವ ಬೆಂಬಲಾತ್ಮಕ ರಚನೆಗಳೊಂದಿಗೆ ನಿಕಟವಾಗಿ ವ್ಯವಹರಿಸಿದೆವು. ಸರ್ಕಾರದ ಅಲ್ಪಾವಧಿ ವಾಸ್ತವ್ಯ, ವಸತಿ ವ್ಯವಸ್ಥೆ, ಸಲಹಾ ಸೇವೆಗಳು, ನ್ಯಾಯಿಕ ಸಲಹಾ ಮತ್ತು ಕಾನೂನು ಸಹಾಯಗಳಿಗಾಗಿ ನೊಂದ ಮಹಿಳೆಯರನ್ನು ಸಾಮಾನ್ಯವಾಗಿ ಕಳಿಸಲಾಗುತ್ತದೆ. ಕರ್ನಾಟಕದ ಹಲವಾರು ಭಾಗಗಳಲ್ಲಿ ಇಂತಹ ಸೇವೆಗಳು ಲಭ್ಯವಿರುವುದಿಲ್ಲ ಅಥವಾ ಕಳಪೆ ಗುಣಮಟ್ಟದ್ದಾಗಿರುತ್ತವೆ. ಮಹಿಳೆಯರ ಅಗತ್ಯಗಳನ್ನು ಸೂಕ್ತವಾಗಿ ಪೂರೈಸುವಂತಹ ಸೇವೆಗಳು ನಿರಂತರವಾಗಿ ಸಿಗುವುದಿಲ್ಲ. ಉದಾಹರಣೆಗೆ, ಬಹುಪಾಲು ಆಶ್ರಯ ವಸತಿಗಳಲ್ಲಿ ಸುಟ್ಟ ಗಾಯದಿಂದ ಬಳಲುವವರು ಮತ್ತು ಹೆಚ್.ಐ.ವಿ. ಬಾಧಿತ ಮಹಿಳೆಯರಿಗೆ (ಸಾಮಾಜಿಕ ಕಳಂಕ ಮತ್ತು ಅಗತ್ಯವಿರುವ ವೈದ್ಯಕೀಯ ಗಮನ ನೀಡಲಾಗದ ಕಾರಣಕ್ಕೆ) ಪ್ರವೇಶವನ್ನು ನಿರಾಕರಿಸಲಾಗಿದೆ. ಅವರು ಹೆಚ್ಚಿನ ತಾರತಮ್ಯಕ್ಕೆ ಒಳಗಾಗಿರುವುದನ್ನು ನೋಡಬಹುದು.

ಈ ಹಿನ್ನಲೆಯಲ್ಲಿ ಹೆಂಗಸರ ಹಕ್ಕಿನ ಸಂಘವು, ಹಿಂಸೆಯನ್ನು ಎದುರಿಸುವ ಮಹಿಳೆಯರಿಗಾಗಿ ಸರ್ಕಾರ ನಡೆಸುವ ಹಾಗೂ ಸರ್ಕಾರದ ಆರ್ಥಿಕ ಬೆಂಬಲ ಪಡೆದು ಸ್ವಯಂಸಂಸ್ಥೆಗಳು ನಡೆಸುವ ಸೇವೆಗಳ ಕುರಿತಾಗಿ ಅಧ್ಯಯನವೊಂದನ್ನು ನಡೆಸಿತು. ಅಧ್ಯಯನದಲ್ಲಿ ನಮ್ಮ ಉದ್ದೇಶವು ಈ ಸೇವೆಗಳ ಯೋಜನೆಯಲ್ಲಿ ನಿರೂಪಿಸಲಾಗಿರುವ ಮೂಲಗುರಿ ಮತ್ತು ದರ್ಶನವನ್ನು ಅರ್ಥಮಾಡಿಕೊಳ್ಳುವುದು, ಲಿಂಗಹಕ್ಕು ದೃಷ್ಟಿಕೋನದಿಂದ ಯೋಜನೆಯನ್ನು ವಿಮರ್ಶಿಸುವುದು. ಹಾಗೂ ಇವೇ ಸೇವೆಗಳನ್ನು ಪ್ರಸ್ತುತ ವಾಸ್ತವದಲ್ಲಿ ಜಾರಿಗೊಳಿಸಿರುವ ರೀತಿಯನ್ನು ಪರೀಕ್ಷಿಸುವುದು, ದತ್ತಾಂಶಗಳನ್ನು ಸಂಗ್ರಹಿಸುವ ಮೂಲಕ ಸೇವೆಗಳಲ್ಲಿ ಇರುವ ನ್ಯೂನತೆಗಳನ್ನು ಮತ್ತು ಸುಧಾರಣೆಯ ಸಾಧ್ಯತೆ ಇರುವ ವಲಯಗಳನ್ನು ಗುರುತಿಸುವುದಾಗಿತ್ತು.

**ಅಧ್ಯಯನದ ಉದ್ದೇಶ**

* ಪ್ರಸ್ತುತದಲ್ಲಿರುವ ಸರ್ಕಾರದಿಂದ ಅನುದಾನ ಪಡೆದ, ಸರ್ಕಾರವು ನಡೆಸುವ ಸಲಹಾ ಮತ್ತು ವಸತಿ ಸೇವೆಗಳ ಗುಣಮಟ್ಟದ ಮೌಲ್ಯಮಾಪನ.
* ಅಗತ್ಯವಿರುವ ಮಹಿಳೆಯರಿಗೆ ಈ ಸೇವೆಗಳ ಲಭ್ಯತೆಯನ್ನು ಪರಿಶೀಲಿಸುವುದು.
* ಸೇವೆಗಳ ಪರಿಣಾಮಕಾರಿ ಕಾರ್ಯಾಚರಣೆಗಾಗಿ ಮೇಲ್ವಿಚಾರಣೆ ಹಾಗೂ ಪುನರಾವಲೋಕನ ವ್ಯವಸ್ಥೆಗಳ ವಿಚಾರಣೆ.
* ಮಹಿಳಾ ಕಕ್ಷಿದಾರರಿಗೆ ನಿರ್ದೇಶನಗಳನ್ನು ನೀಡಲು ಇತರೆ ಬೆಂಬಲ ವ್ಯವಸ್ಥೆಗಳೊಂದಿಗೆ ಸಂಪರ್ಕ ಕಲ್ಪಿಸುವ ವಿಷಯದಲ್ಲಿ ಸಾಮರ್ಥ್ಯದಂತಹ ವಿಚಾರಗಳನ್ನು ಪರೀಕ್ಷಿಸುವುದು.

ಅಧ್ಯಯನಕ್ಕಾಗಿ ಕರ್ನಾಟಕದ ಹನ್ನೊಂದು ಜಿಲ್ಲೆಗಳನ್ನು ನಮೂನೆಗಳಾಗಿ ಗುರುತಿಸಲಾಯಿತು. ಬೆಂಗಳೂರು ನಗರ, ಬೆಳಗಾವಿ, ಹಾವೇರಿ, ಕೋಲಾರ ಮತ್ತು ಮೈಸೂರು, ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ, ಬಿಜಾಪುರ, ಬಳ್ಳಾರಿ, ದಾವಣಗೆರೆ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿರುವ ಸರ್ಕಾರಿ ಸಲಹಾ ಹಾಗೂ ವಸತಿ ಸೇವೆಗಳನ್ನು ಅಧ್ಯಯನ ಮಾಡಲಾಯಿತು. ಈ ಅಧ್ಯಯನವನ್ನು 2008-2009 ರಲ್ಲಿ ನಡೆಸಲಾಯಿತು.

**ಅಧ್ಯಯನ ಮಾಡಲಾದ ಸೇವೆಗಳು**

- **ಸರ್ಕಾರದ ಅನುದಾನ ಪಡೆಯುವ ಸಲಹಾ ಸೇವೆಗಳು:** ಸರ್ಕಾರದಿಂದ ಆರ್ಥಿಕ ಬೆಂಬಲ ಪಡೆದುಕೊಂಡ ಸರ್ಕಾರೇತರ ಸಂಸ್ಥೆಗಳು ನಡೆಸುತ್ತಿರುವ ಸೇವೆಗಳಾದ ಸಾಂತ್ವನ, ಕೌಟುಂಬಿಕ ಸಲಹಾ ಕೇಂದ್ರ ಇತ್ಯಾದಿ.
- **ಸರ್ಕಾರದ ಅನುದಾನ ಪಡೆಯುವ ವಸತಿ ಸೇವೆಗಳು:** ಸರ್ಕಾರದಿಂದ ಆರ್ಥಿಕ ಸಹಾಯ ಪಡೆದುಕೊಂಡ ಸರ್ಕಾರೇತರ ಸಂಸ್ಥೆಗಳು ನಡೆಸುತ್ತಿರುವ ವಸತಿ ಸೇವೆಗಳಾದ ಸ್ವಾಧಾರ್ ಹಾಗೂ ಅಲ್ಪಾವಧಿ ವಸತಿ ಗೃಹ.
- **ಸರ್ಕಾರ ನಡೆಸುವ ವಸತಿ ಸೇವೆಗಳು:** ಸರ್ಕಾರವೇ ಸಂಪೂರ್ಣವಾಗಿ ನಿರ್ವಹಿಸಿ ನಡೆಸುತ್ತಿರುವಂತಹವೊಂದರ ರಾಜ್ಯ ನಿಲಯಗಳು ಹಾಗೂ ಸ್ವೀಕಾರ ಕೇಂದ್ರಗಳು

## ಅಧ್ಯಯನ : ಮುಖ್ಯ ವಿಚಾರಗಳು

ಅಧ್ಯಯನ ಕೈಗೊಂಡ ಹನ್ನೊಂದು ಜಿಲ್ಲೆಗಳಲ್ಲಿನ ಇಪ್ಪತ್ತೈದು ಸಾಂತ್ವನ ಕೇಂದ್ರಗಳಲ್ಲಿ ಹದಿನಾರನ್ನು ನಮೂನೆಯಾಗಿ ಆರಿಸಿಕೊಳ್ಳಲಾಯಿತು. ಹನ್ನೊಂದು ಜಿಲ್ಲೆಗಳಲ್ಲಿರುವ ಇಪ್ಪತ್ನಾಲ್ಕು ಕೌಟುಂಬಿಕ ಸಲಹಾ ಕೇಂದ್ರಗಳಲ್ಲಿ ಹದಿನಾರನ್ನು ಅಧ್ಯಯನದ ಭಾಗವಾಗಿಸಿ ಕೊಳ್ಳಲಾಯಿತು. ಇವು ಸರ್ಕಾರದ ಅನುದಾನ ಪಡೆಯುವ ಸಾಂತ್ವನ ಹಾಗೂ ಕೌಟುಂಬಿಕ ಸಲಹಾ ಕೇಂದ್ರಗಳು.

### ಮಾನವ ಸಂಪನ್ಮೂಲಗಳು:

* ಹದಿನಾರು ಸಾಂತ್ವನ ಕೇಂದ್ರಗಳಲ್ಲಿ ಆರು ಕೇಂದ್ರಗಳು ಯೋಜನೆ ನಿಗದಿಪಡಿಸಿದ ಪದವಿ ಪಡೆದ ಸಲಹೆಗಾರರನ್ನು ಹೊಂದಿದ್ದವು.
* ಹಿಂಸೆಯನ್ನು ಎದುರಿಸುತ್ತಿರುವ ಮಹಿಳೆಯರಿಗೆ ಸಲಹೆ ನೀಡಲು ನಿಗದಿಪಡಿಸಿದ ಪದವಿಗಳು ಸಾಲದು.
* ಅಧ್ಯಯನ ಮಾಡಿದ ಹದಿನಾಲ್ಕು ಸಾಂತ್ವನ ಕೇಂದ್ರಗಳಲ್ಲಿ ಸಲಹೆಗಾರರಿಗೆ ಪೂರ್ವಾನುಭವ ಇರಲಿಲ್ಲ.
* ಸಾಂತ್ವನ ಸಿಬ್ಬಂದಿಗಳ ಸಾಮರ್ಥ್ಯ ನಿರ್ಮಾಣ ಕುರಿತು ಸೂಕ್ತ ಯೋಜನೆಗಳಿಲ್ಲ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಒಂದೇ ಒಂದು ಬಾರಿ ಮೂರು ದಿನಗಳ ತರಬೇತಿ ಕಾರ್ಯಕ್ರಮ ವನ್ನು ಸಲಹೆಗಾರರಿಗೆ ನೀಡಿ, ಹಿಂಸೆಯನ್ನು ಎದುರಿಸುತ್ತಿರುವ ಮಹಿಳೆಯರಿಗೆ ಸಲಹೆ ನೀಡಬೇಕೆಂದು ನಿರೀಕ್ಷಿಸುತ್ತದೆ. ಇದು ಯಥೋಚಿತವಲ್ಲ.
* ಕೆಲಸ ಮಾಡುತ್ತಿರುವುದಕ್ಕೆ ಈಗ ನೀಡುತ್ತಿರುವ ವೇತನ/ಗೌರವ ಧನ ಸಲಹೆಗಾರರಿಗೆ ಸಾಕಾಗುತ್ತಿಲ್ಲ.
* ಅರ್ಧದಷ್ಟು ಸಲಹೆಗಾರರಿಗೆ ನಗದಿನಲ್ಲಿ ವೇತನ ಪಾವತಿಸ ಲಾಗುತ್ತದೆ. ಈ ಪದ್ಧತಿ ಭ್ರಷ್ಟಾಚಾರಕ್ಕೆ ಮತ್ತು ಹಣ ದುರುಪಯೋಗಕ್ಕೆ ಕಾರಣವಾಗುತ್ತದೆ;
* ಸಲಹೆಗಾರರು ಹೆಚ್ಚು ಕಾಲ ಉದ್ಯೋಗದಲ್ಲಿ ಉಳಿಯುತ್ತಿಲ್ಲ. ಸಾಮಾನ್ಯವಾಗಿ ಸಲಹೆಗಾರರು ಸೇವೆಯಲ್ಲಿ ಉಳಿಯುವುದು ಹೆಚ್ಚೆಂದರೆ ಮೂರು ವರ್ಷಗಳು.
* ಹದಿನಾರರಲ್ಲಿ ಹತ್ತು ಕೌಟುಂಬಿಕ ಸಲಹಾ ಕೇಂದ್ರಗಳ ಸಲಹೆಗಾರರು ನಿಗದಿತ ಪದವಿಗಳನ್ನು ಹೊಂದಿದ್ದರು.
* ಹಿಂಸೆಯನ್ನು ಎದುರಿಸುತ್ತಿರುವ ಮಹಿಳೆಯರಿಗೆ ಸಲಹೆ ನೀಡಲು ಸಲಹೆಗಾರರಿಗೆ ನಿಗದಿ ಪಡಿಸಿದ ಪದವಿ ಸಾಲದು. ಸಲಹೆಗಾರರನ್ನು ಆಯ್ಕೆ ಮಾಡಲು ಪದವಿ ಅರ್ಹತೆಗಷ್ಟೇ ಒತ್ತು ಕೊಟ್ಟಿರುವುದು ಲೋಪವಾಗಿ ಪರಿಣಮಿಸಿದೆ.
* ಅರ್ಧದಷ್ಟು ಕೌಟುಂಬಿಕ ಸಲಹಾ ಕೇಂದ್ರಗಳ ಸಲಹೆಗಾರರಿಗೆ ತರಬೇತಿಯೂ ಇಲ್ಲ; ಕೆಲಸದ ಪೂರ್ವಾನುಭವವೂ ಇಲ್ಲ.
* ಕೌಟುಂಬಿಕ ಸಲಹಾಕೇಂದ್ರಗಳಲ್ಲಿ ದೀರ್ಘಾವಧಿಗೆ ಕೆಲಸ ಮಾಡಲು ಸಲಹೆಗಾರರು ಸಿದ್ಧರಿಲ್ಲ. ಅವರ ಸೇವಾವಧಿ ಸಾಮಾನ್ಯವಾಗಿ ಸುಮಾರು ಮೂರುವರ್ಷಗಳು.

ಸಾಂತ್ವನ ಹಾಗೂ ಕೌಟುಂಬಿಕ ಸಲಹಾಕೇಂದ್ರಗಳಲ್ಲಿ ಸಲಹಾ ಸೇವೆ ಪ್ರಮುಖ ಚಟುವಟಿಕೆಯಾಗಿದೆ. ಅರ್ಹತೆ, ಅನುಭವ ಹಾಗೂ ತರಬೇತಿಯ ದೃಷ್ಟಿಯಿಂದ ಸಲಹೆಗಾರರಿಗೆ ಸೂಕ್ತ ಸಿದ್ಧತೆ ಇಲ್ಲದಿರುವುದು ಸೇವೆಗಳ ಗುಣಮಟ್ಟವನ್ನು ದುರ್ಬಲಗೊಳಿಸಿದೆ.

### ಕೇಂದ್ರಗಳಲ್ಲಿ ಮೂಲಭೂತ ಸೌಕರ್ಯ

* **ಸಾರಿಗೆ:** ಹದಿನಾರು ಸಾಂತ್ವನ ಕೇಂದ್ರಗಳಲ್ಲಿ ಎರಡೇ ಎರಡು ಕೇಂದ್ರಗಳು ಸ್ವಂತ ವಾಹನಗಳನ್ನು ಹೊಂದಿವೆ. ಉಳಿದ ಕೇಂದ್ರಗಳು ಸಾರ್ವಜನಿಕ ಸಾರಿಗೆ ಅಥವಾ ಬಾಡಿಗೆ ವಾಹನಗಳನ್ನು ಅಗತ್ಯ ವಿದ್ದಾಗ ಬಳಸುತ್ತವೆ.
* ಅಧ್ಯಯನ ಮಾಡಲಾದ ಹದಿನಾರು ಕೇಂದ್ರಗಳಲ್ಲಿ ನಾಲ್ಕು ಕೇಂದ್ರಗಳಿಗೆ ದರಮುಕ್ತ ದೂರವಾಣಿ ಸಂಖ್ಯೆಗಳಿಲ್ಲ.
* ಹದಿನಾರು ಸಾಂತ್ವನಕೇಂದ್ರಗಳಲ್ಲಿ ಹತ್ತು ಕೇಂದ್ರಗಳು ಸೂಕ್ತ ಆಸನ ವ್ಯವಸ್ಥೆ ಹೊಂದಿವೆ. ಇತರ ಕೇಂದ್ರಗಳಲ್ಲಿ ಆಸನ ವ್ಯವಸ್ಥೆಯ ಕೊರತೆ ಇದೆ. ಸಲಹೆಗಾರರನ್ನು ಭೇಟಿ ಮಾಡಲು ಸರತಿಗಾಗಿ ಮಹಿಳೆಯರು ಕೇಂದ್ರದ ಹೊರಗೆ ಕಾಯುತ್ತಿದ್ದರು.
* ಅರ್ಧದಷ್ಟು ಸಾಂತ್ವನ ಕೇಂದ್ರಗಳಲ್ಲಿ ಸಲಹೆಗೆಂದೇ ಸುತ್ತುವರೆದ ಸ್ಥಳವಿದೆ. ಉಳಿದವುಗಳಲ್ಲಿ ಖಾಸಗಿ ಸಂಭಾಷಣೆಗೆ ಸ್ಥಳಾಭಾವವಿದೆ.

### ಕೌಟುಂಬಿಕ ಸಲಹಾ ಕೇಂದ್ರ

* **ಸಾರಿಗೆ:** ಹದಿನಾರು ಕೌಟುಂಬಿಕ ಸಲಹಾಕೇಂದ್ರಗಳಲ್ಲಿ ಆರು ಕೇಂದ್ರಗಳು ಸ್ವಂತ ವಾಹನ ಸೌಕರ್ಯವನ್ನು ಹೊಂದಿದ್ದವು.
* ಐದು ಕೌಟುಂಬಿಕ ಸಲಹಾ ಕೇಂದ್ರಗಳು, ಕೇಂದ್ರದ ಸುಧಾರಣೆಗಾಗಿ ಮೂಲಭೂತ ಸೌಕರ್ಯಗಳು ಮುಖ್ಯವೆಂದು ತಿಳಿಸಿದವು.

ಸಂಕಟದಲ್ಲಿರುವ ಮಹಿಳೆಯರಿಗೆ ಸಹಾಯವಾಣಿಯಾಗಿ ಸಾಂತ್ವನ ಕೇಂದ್ರಗಳನ್ನು ಕಲ್ಪಿಸಲಾಗಿದೆ. ದರಮುಕ್ತ ದೂರವಾಣಿಯ ಸೌಲಭ್ಯವಿಲ್ಲದೆ ಸಂಸ್ಥೆಗಳು ಇಪ್ಪತ್ತ ನಾಲ್ಕು ಗಂಟೆಗಳೂ ಕೆಲಸ ಮಾಡಲು ಸಾಧ್ಯವಾಗದೇ ಇರುವುದು ಸಹಾಯವಾಣಿಯ ಉದ್ದೇಶ ವನ್ನೇ ನಿರರ್ಥಕಗೊಳಿಸಿದೆ.

### ಅಂತರ್–ಸಂಸ್ಥೆಗಳ ಸಮನ್ವಯತೆ

* **ಪೊಲೀಸ್:** ಸಂದರ್ಶಿಸಿದ ಹದಿಮೂರು ಪೊಲೀಸ್ ಅಧಿಕಾರಿಗಳಲ್ಲಿ ಆರು ಅಧಿಕಾರಿಗಳು, ಪ್ರಕರಣಗಳನ್ನು ಸಾಂತ್ವನ ಕೇಂದ್ರಗಳಿಗೆ ಕಳುಹಿಸುವುದಿಲ್ಲವೆಂದು ಹೇಳಿದರು. ಅವರಲ್ಲಿ ಮೂರು ಪೊಲೀಸು ಅಧಿಕಾರಿಗಳು ಸಾಂತ್ವನಕೇಂದ್ರ ಎಲ್ಲಿದೆ ಎಂದು ತಮಗೆ ತಿಳಿದಿರಲಿಲ್ಲ ವೆಂದರು.
* **ವೈದ್ಯರು** : ಸಂದರ್ಶಿಸಿದ 12 ಸರ್ಕಾರಿ ವೈದ್ಯರಲ್ಲಿ 8 ವೈದ್ಯರು ತಮಗೆ ಸಾಂತ್ವನದ ಬಗ್ಗೆ ತಿಳಿದಿಲ್ಲವೆಂದರು.
* **ರಕ್ಷಣಾಧಿಕಾರಿ:** ಆರು ಸಾಂತ್ವನಕೇಂದ್ರಗಳು ಯಾವುದೇ ಪ್ರಕರಣ ಗಳನ್ನು ರಕ್ಷಣಾಧಿಕಾರಿಯ ಬಳಿಗೆ ಕಳಿಸಿರಲಿಲ್ಲ;
* **ಕಾನೂನು ಸಹಾಯ:** ಸಾಂತ್ವನಕೇಂದ್ರಗಳಿಗೆ ವಕೀಲರ ಭೇಟಿ ನಿಗದಿತವಾಗಿಲ್ಲ ಹಾಗೂ ನಿಯಮಿತವಾಗಿಲ್ಲ. ಕೆಲವು ಕೇಂದ್ರಗಳಲ್ಲಿ ವಾರಕ್ಕೆ ಒಮ್ಮೆಯಾದರೆ, ಇನ್ನಿತರ ಕೇಂದ್ರಗಳಲ್ಲಿ ತಿಂಗಳಿಗೊಮ್ಮೆ.
* **ಪೊಲೀಸ್:** ಆರು ಕೌಟುಂಬಿಕ ಸಲಹಾ ಕೇಂದ್ರಗಳು ಯಾವುದೇ ಪ್ರಕರಣಗಳನ್ನು ಪೊಲೀಸ್ ಠಾಣೆಗೆ ಕಳಿಸಿರಲಿಲ್ಲ;
* **ವೈದ್ಯರು:** ಕೌಟುಂಬಿಕ ಸಲಹಾಕೇಂದ್ರದ ಪ್ರದೇಶದಲ್ಲಿರುವ ಸರ್ಕಾರಿ ಆಸ್ಪತ್ರೆಯಲ್ಲಿ ಸಂದರ್ಶಿಸಲಾದ ಹನ್ನೊಂದು ವೈದ್ಯರುಗಳಲ್ಲಿ ನಾಲ್ವರು ವೈದ್ಯರಿಗೆ ತಮ್ಮ ಪ್ರದೇಶದಲ್ಲಿರುವ ಕೌಟುಂಬಿಕ ಸಲಹಾ ಕೇಂದ್ರದ ಕುರಿತು ಮಾಹಿತಿ ಇರಲಿಲ್ಲ.
* ಸಂದರ್ಶಿಸಿದ ಅರ್ಧದಷ್ಟು ವೈದ್ಯರು ಕೌಟುಂಬಿಕ ಸಲಹಾ ಕೇಂದ್ರ ಗಳು ಸುಟ್ಟುಕೊಂಡ ಮಹಿಳೆಯರನ್ನು ತಮ್ಮಲ್ಲಿಗೆ ಕಳಿಸುತ್ತಿವೆಯೆಂದು ಹೇಳಿದರು.

* ಸುಟ್ಟಗಾಯಗಳಿಂದ ಬಂದ ಮಹಿಳೆಯರಿಗೆ ಬೇಕಾದ ವೈದ್ಯಕೀಯ ವ್ಯವಸ್ಥೆ ಸರ್ಕಾರಿ ಆಸ್ಪತ್ರೆಗಳಲ್ಲಿ ಇಲ್ಲದ ಕಾರಣ ಖಾಸಗಿ ಆಸ್ಪತ್ರೆಗಳಿಗೆ ಚಿಕಿತ್ಸೆಗೆಂದು ಕಳಿಸಲಾಗುತ್ತದೆ.
* **ರಕ್ಷಣಾಧಿಕಾರಿಗಳು:** ಹದಿನಾರು ಕೌಟುಂಬಿಕ ಸಲಹಾ ಕೇಂದ್ರಗಳಲ್ಲಿ ಆರುಕೇಂದ್ರಗಳು ಯಾವುದೇ ಪ್ರಕರಣವನ್ನು ರಕ್ಷಣಾಧಿಕಾರಿಗೆ ಕಳಿಸಿಲ್ಲ.

**ಕಾರ್ಯಕಾರಿ ಮಾರ್ಗದರ್ಶಿಗಳು**

* ಅಧ್ಯಯನ ಮಾಡಿದ ಅರ್ಧದಷ್ಟು ಸಾಂತ್ವನಕೇಂದ್ರಗಳು, ಕೇಂದ್ರವನ್ನು ನಡೆಸಲು ಇಲಾಖೆಯಿಂದ ಮೌಖಿಕ ಆದೇಶಗಳು ಮಾತ್ರ ದೊರಕಿವೆ ಎಂದು ತಿಳಿಸಿದರು.
* ಒಂದು ಸಾಂತ್ವನಕೇಂದ್ರವು ಲಿಖಿತ ಆದೇಶ ಬಂದಿದೆ ಎಂದು ಹೇಳಿದೆ. ಉಳಿದ ಸಾಂತ್ವನ ಕೇಂದ್ರಗಳಿಗೆ ಯಾವುದೇ ಆದೇಶಗಳು ಅಥವಾ ಮಾರ್ಗದರ್ಶಿಗಳು ಬಂದಿಲ್ಲವೆಂದು ಹೇಳಿದವು.
* ಸಲಹೆಗಾರರಿಗೆ ಮೊದಲು ನೀಡಿದ ತರಬೇತಿಯಲ್ಲಿ ನೀಡಿರುವ ಮಾರ್ಗದರ್ಶನ ಹೊರತುಪಡಿಸಿ ಪ್ರಕರಣ ನಿರ್ವಹಣೆಕುರಿತಾಗಿ ಯಾವ ರೂಪರೇಷೆಗಳಿಲ್ಲ.
* ಪ್ರಕರಣಗಳನ್ನು ಮುನ್ನಡೆಸಲು ಎಲ್ಲ ಕೇಂದ್ರಗಳು ತಮ್ಮದೇ ವಿಧಾನವನ್ನು ಅನುಸರಿಸುತ್ತವೆ.
* **ದಾಖಲಾತಿ:** ಪ್ರಕರಣಗಳನ್ನು ದಾಖಲಿಸಲು ಕೇಂದ್ರಗಳು ತಮ್ಮದೇ ಆದ ಸ್ವಂತ ನಮೂನೆಗಳನ್ನು ಹೊಂದಿವೆ.

  ಕೌಟುಂಬಿಕ ಸಲಹಾ ಕೇಂದ್ರಗಳಲ್ಲೂ ಪ್ರಕರಣ ನಿರ್ವಹಣಾ ಹಾಗೂ ದಾಖಲಾತಿಯ ಬಗ್ಗೆ ಇಲಾಖೆಯಿಂದ ಲಿಖಿತ ಮಾರ್ಗದರ್ಶನಗಳು ಇಲ್ಲ. ಇದೇ ಪರಿಸ್ಥಿತಿ ಪ್ರಕರಣ ನಿರ್ವಹಣೆ ಹಾಗೂ ದಾಖಲಾತಿಗೆ ಸಂಬಂಧಿಸಿದಂತೆ ಸಲಹಾಗಾರರಿಗೆ ತರಬೇತಿಯ ಅವಶ್ಯಕತೆ ಸಾಂತ್ವನ ಹಾಗೂ ಕೌಟುಂಬಿಕ ಸಲಹಾಕೇಂದ್ರಗಳಲ್ಲಿಯೂ ಎದ್ದು ಕಾಣುತ್ತಿದೆ.

**ಸಾಂತ್ವನ ಲಭ್ಯತೆ**

* ರಾಜ್ಯಾದ್ಯಂತ ಸಾಂತ್ವನಕೇಂದ್ರಗಳು ಸಮನಾಗಿ ಹರಡಿಕೊಂಡಿಲ್ಲ. ಹರಡುವಿಕೆಯು ಜನಸಂಖ್ಯೆಯನ್ನಾಗಲಿ ಅಥವಾ ಇನ್ಯಾವುದೇ ಮಾನದಂಡವನ್ನಾಗಲಿ ಅನುಸರಿಸಿಲ್ಲ. ಉದಾ: ಮೈಸೂರಿನಲ್ಲಿ ಐದು ಸಾಂತ್ವನ ಕೇಂದ್ರಗಳಿದ್ದರೆ, ದೊಡ್ಡ ಜಿಲ್ಲೆಗಳಾದ ಬಳ್ಳಾರಿ, ದಕ್ಷಿಣ ಕನ್ನಡದಲ್ಲಿ ಎರಡೇ ಸಾಂತ್ವನಕೇಂದ್ರಗಳಿವೆ. ಉತ್ತರ ಕನ್ನಡದಲ್ಲಿ ಒಂದು ಸಾಂತ್ವನಕೇಂದ್ರವಿದೆ (ನಾವು ಅಧ್ಯಯನ ಮಾಡುವಾಗ ಇದ್ದ ಪರಿಸ್ಥಿತಿ ಇದು. ಈಗ ಇನ್ನಷ್ಟು ಸಾಂತ್ವನಕೇಂದ್ರಗಳು ಮಂಜೂರಾತಿಯಾಗಿವೆ).
* ಸಂದರ್ಶಿಸಿದ ಹದಿನಾರು ಜಿಲ್ಲೆಯಲ್ಲಿ ಮಹಿಳೆಯರೊಡನೆ ಕೆಲಸ ಮಾಡುವ ಸರ್ಕಾರೇತರ ಸಂಸ್ಥೆಗಳಲ್ಲಿ ಹದಿನಾಲ್ಕು ಕೇಂದ್ರಗಳು ಮಹಿಳೆಯರಿಗೆ ಸಾಂತ್ವನಕೇಂದ್ರಗಳು ಸುಲಭವಾಗಿ ಲಭ್ಯವಿಲ್ಲ ಎಂದು ಹೇಳಿದವು.
* ಸಾಂತ್ವನ ಕೇಂದ್ರಗಳನ್ನು ಮಂಜೂರಾತಿ ಮಾಡುವಾಗ ರಾಜಕೀಯ ಒತ್ತಡ ಹಾಗೂ ಭ್ರಷ್ಟಾಚಾರ ಪ್ರಮುಖ ಪಾತ್ರವಹಿಸುತ್ತದೆ ಎಂದು ಎಲ್ಲಾ ಕೇಂದ್ರಗಳು ಹೇಳಿವೆ. ಇದು ಕೌಟುಂಬಿಕ ಸಲಹಾಕೇಂದ್ರಗಳ ಮಂಜೂರಾತಿಯಲ್ಲೂ ಕಾಣಬಹುದಾಗಿದೆ.
* ರಾಜ್ಯಾದ್ಯಂತ ಕೌಟುಂಬಿಕ ಸಲಹಾಕೇಂದ್ರಗಳು ಸಮನಾಗಿ ಹರಡಿಕೊಂಡಿಲ್ಲ. ಬೆಂಗಳೂರುನಗರದಲ್ಲಿ 9 ಕೇಂದ್ರಗಳಿದ್ದರೆ, ಉತ್ತರ ಕನ್ನಡದಲ್ಲಿ ಒಂದು ಕೇಂದ್ರವಿದೆ.
* ಜಿಲ್ಲೆಯಾದ್ಯಂತ ಮಹಿಳೆಯರು ಕೌಟುಂಬಿಕ ಸಲಹಾಕೇಂದ್ರಗಳಿಗೆ ಸಹಾಯ ಕೋರಿ ದೂರದಹಳ್ಳಿಗಳಿಂದ ಬರುತ್ತಾರೆ. ಇನ್ನಷ್ಟು ಕೇಂದ್ರಗಳ ಅವಶ್ಯಕತೆ ಇದೆ ಎಂದು ಇದು ಸ್ಪಷ್ಟವಾಗಿ ತೋರಿಸುತ್ತದೆ.

**ಆಯ-ವ್ಯಯ**

* ಸಿಬ್ಬಂದಿ ತರಬೇತಿ ಮತ್ತು ವೇತನ, ಆರ್ಥಿಕ ಸಹಾಯ ಮತ್ತು ಮೂಲಭೂತ ಸೌಕರ್ಯ ಕುರಿತ ಆಯ-ವ್ಯಯ ಹಂಚಿಕೆ ಯಥೋಚಿತವಾಗಿಲ್ಲ.
* ಹದಿನಾರು ಸಾಂತ್ವನಕೇಂದ್ರಗಳಲ್ಲಿ ಹನ್ನೆರಡು ಕೇಂದ್ರಗಳು ಸೂಕ್ತ ಸಮಯಕ್ಕೆ ಸಹಾಯಧನ ಬಾರದ ಕಾರಣಕ್ಕೆ ಸಮಸ್ಯೆಗಳನ್ನು ಎದುರಿಸುತ್ತಿವೆ.
* ಹದಿನಾರು ಕೌಟುಂಬಿಕ ಸಲಹಾ ಕೇಂದ್ರಗಳಲ್ಲಿ ಹದಿನಾಲ್ಕು ಕೇಂದ್ರಗಳು ಸಮಯಕ್ಕೆ ಸರಿಯಾಗಿ ಸಹಾಯಧನ ಬಾರದಕಾರಣ ಸಮಸ್ಯೆಯನ್ನು ಎದುರಿಸುತ್ತಿವೆ.
* ಸಂದರ್ಶಿಸಿದ ಹದಿನರು ಕೌಟುಂಬಿಕ ಸಲಹಾಕೇಂದ್ರಗಳಲ್ಲಿ ಹದಿನಾಲ್ಕು ಕೇಂದ್ರಗಳು ಹೆಚ್ಚಿನ ಆರ್ಥಿಕ ಸಹಾಯವನ್ನು ಬಯಸುತ್ತವೆ; ನಿರೀಕ್ಷಿಸುತ್ತವೆ.
* ಸಾಂತ್ವನ ಮತ್ತು ಕೌಟುಂಬಿಕ ಸಲಹಾಕೇಂದ್ರಗಳನ್ನು ನಡೆಸುತ್ತಿರುವ ಬಹುಪಾಲು ಸಂಸ್ಥೆಗಳಿಗೆ ಆಯ-ವ್ಯಯದ ಕೊರತೆ ಮತ್ತು ಇಲಾಖೆ ಯಿಂದ ಹಣದ ವಿತರಣೆಯಲ್ಲಿ ವಿಳಂಬವಾಗುತ್ತಿದೆ ಎಂದು ಕಂಡುಬಂದಿದೆ.

**ಮೇಲ್ವಿಚಾರಣೆ ಮತ್ತು ವಿಮರ್ಶಾ ವಿಧಾನಗಳು:**

* ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ನಿಯಮಿಸಿರುವ ವಿಮರ್ಶಾ ನಮೂನೆಯು ಮುಖ್ಯವಾಗಿ ನೋಡುವುದು ಕೇಂದ್ರ ಗಳಿಗೆ ಬಂದ ಪ್ರಕರಣಗಳು ಮತ್ತು ವೆಚ್ಚವಾದ ಹಣವನ್ನು. ಸಿಬ್ಬಂದಿ ಸಾಮರ್ಥ್ಯ, ಮನೋಭಾವನೆ, ಮೂಲಭೂತ ಸೌಕರ್ಯ ಗಳನ್ನು ಗಮನಿಸಲಾಗುವುದಿಲ್ಲ.
* ಸೇವೆಗಳನ್ನು ಗಳಿಸುತ್ತಿರುವ ಮಹಿಳೆಯರ ಪ್ರತಿಕ್ರಿಯೆ ಹಾಗೂ ಗುಣಮಟ್ಟಕ್ಕೆ ಸಂಬಂಧಿಸಿದ ವಿಚಾರಗಳಿಗೆ, ವಿಮರ್ಶೆಗೆ ಅಲ್ಲಿ ಅವಕಾಶವಿಲ್ಲ.
* ಸಾಂತ್ವನಕೇಂದ್ರಗಳು ಕಾರ್ಯ ಚಟುವಟಿಕೆಗಳನ್ನು ಮೇಲ್ವಿಚಾರಣೆ ಮಾಡಲು ನಿಯಮಿಸಿರುವ ಜಿಲ್ಲಾ ಮಟ್ಟದ ಸಮಿತಿ ನಿಯಮಿತವಾಗಿ ಸಭೆ ಸೇರುವುದಿಲ್ಲ.
* ಮಂಡಳಿಯು ನಿಯಮಿಸಿರುವ ಪರಿವೀಕ್ಷಣಾ ನಮೂನೆಯು ಸಿಬ್ಬಂದಿ ಸಾಮರ್ಥ್ಯ, ಮೂಲಭೂತ ಸೌಕರ್ಯ ಅಥವಾ ಮಾನವ ಸಂಪನ್ಮೂಲದ ಹಿನ್ನೆಲೆಯಲ್ಲಿ ಗುಣಮಟ್ಟದ ವಿಷಯ ಗಳನ್ನು ಪೂರ್ತಿಯಾಗಿ ಉದ್ದೇಶಿಸುವುದಿಲ್ಲ.
* ಉಪ-ಸಮಿತಿ ಸಭೆಗಳು ಪ್ರಕರಣಗಳ ಕುರಿತ ಚರ್ಚೆಗೆ ಮತ್ತು ಕೇಂದ್ರದ ಚಟುವಟಿಕೆಗಳನ್ನು ಮಂಡಳಿಯ ಸದಸ್ಯರಿಗೆ ಅಪ್‌ಡೇಟ್ ಮಾಡುವುದಕ್ಕೆ ಹೆಚ್ಚಿನ ಒತ್ತು ನೀಡಲಾಗುತ್ತದೆ. ಕೇಂದ್ರಗಳನ್ನು ನಡೆಸಲು ಇರುವ ಸವಾಲುಗಳು ಹಾಗೂ ಸಮಸ್ಯೆಗಳನ್ನು ಕುರಿತು ಈ ಸಭೆಗಳಲ್ಲಿ ಚರ್ಚಿಸುವುದೇ ವಿರಳ.

❑

# ಗಾರ್ಮೆಂಟ್ಸ್‌ಗಳಲ್ಲಿ ನಿತ್ಯ ದೌರ್ಜನ್ಯ : ಪರಿಹಾರ ಏನು? ಹೇಗೆ?

.....................● ಪ್ರತಿಭಾ

ಕಳೆದ ತಿಂಗಳು, ಮಾರ್ಚ್ 20 ಶನಿವಾರದಂದು ಬೆಂಗಳೂರಿನಲ್ಲಿರುವ ಗೋಲ್ಡನ್ ಸೀಮ್ ಗಾರ್ಮೆಂಟ್ಸ್‌ನಲ್ಲಿ ಕೆಲಸ ಮಾಡುತ್ತಿದ್ದ 17 ವರ್ಷದ ರೂಪಾ ಎಂಬ ಯುವತಿಯನ್ನು ನಿಗೂಢ ರೀತಿಯಲ್ಲಿ ಸುಟ್ಟು ಹಾಕಲಾಗಿದೆ. ನೆಲಮಂಗಲ ಪೊಲೀಸ್ ಠಾಣೆಯ ಪೊಲೀಸರು ಈ ಕೇಸ್‌ನ್ನು ಭಾರತೀಯ ದಂಡ ಸಂಹಿತೆ ಸೆಕ್ಷನ್ 302 ಹಾಗೂ 201ರ ಅಡಿಯಲ್ಲಿ ಕೊಲೆ ಎಂದು ದೂರು ದಾಖಲಿಸಿದ್ದಾರೆ. ಈ ಘಟನೆ ನಡೆದು ಇಂದಿಗೆ ಮೂರು ವಾರಗಳಾದರೂ ನಮಗೆ ತಿಳಿದ ಪ್ರಕಾರ ಯಾರನ್ನೂ ಬಂಧಿಸಿಲ್ಲ.

ಮೇಲ್ನೋಟಕ್ಕೆ ಬೆಂಗಳೂರಿನಂತಹ ಮಹಾನಗರಿಯ ಸಾವಿರಾರು ಅಪರಾಧ ಪ್ರಕರಣಗಳಲ್ಲಿ ಇದೊಂದು ಎಂದು ಎಲ್ಲರೂ ಉಪೇಕ್ಷಿಸ ಬಹುದಾದಂತಹುದ್ದು. ಆದರೆ ವಿಷಯದ ಆಳಕ್ಕೆ ಹೋದಷ್ಟೂ ಹೊಸ ಹೊಸ ಅಂಶಗಳು ಬೆಳಕಿಗೆ ಬರುತ್ತಿವೆ. ಕಳೆದ ಕೆಲವು ವರ್ಷಗಳಲ್ಲಿ ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿರುವ ಯುವತಿಯರ ಅಸಹಜ ಸಾವುಗಳು ಮಾಧ್ಯಮಗಳಲ್ಲಿ ವರದಿಯಾಗುತ್ತಲೇ ಇವೆ.

ಪ್ರತಿದಿನ, ಪ್ರತಿ ಗಾರ್ಮೆಂಟ್ ಕಾರ್ಖಾನೆಗಳಲ್ಲಿ ಪುರುಷ ಸೂಪರ್‌ವೈಸರ್ ಹಾಗೂ ಮ್ಯಾನೇಜರ್‌ಗಳ ಕೈ ಕೆಳಗೆ ದುಡಿಯುತ್ತಿರುವ ಮಹಿಳಾ ಕಾರ್ಮಿಕರು ಅವರಿಂದ ಹಲವಾರು ರೀತಿಯ ದೌರ್ಜನ್ಯ ಗಳನ್ನು ಎದುರಿಸುತ್ತಲೇ ಇದ್ದಾರೆ. ಬಟ್ಟೆಗಳನ್ನೇ ಕಾರ್ಮಿಕರ ಮುಖದ ಮೇಲೆ ಎಸೆಯುವುದು, ಅವರ ಕತ್ತು ಹಿಡಿದು ತಳ್ಳುವುದು, ಯಾವುದೇ ರೀತಿಯ ಪ್ರತಿಭಟನೆ ತೋರಿದರೆ, ಎಲ್ಲ ಕಾರ್ಮಿಕರ ಎದುರಿಗೆ ದಿನವಿಡೀ ನಿಲ್ಲಿಸುವುದು, 'ನಾಯಿ' 'ಕತ್ತೆ' 'ಗೂಬೆ' ಅಲ್ಲದೆ ಇತರ ಅವಾಚ್ಯ ಶಬ್ದಗಳಿಂದ ಬೈಯುವುದು ಈ ದೌರ್ಜನ್ಯಗಳ ಕೆಲವು ಉದಾಹರಣೆಗಳು.

ಪ್ರತಿದಿನ ಕಾರ್ಖಾನೆಗಳಲ್ಲಿ ಮ್ಯಾನೇಜರ್‌ಗಳು ಹಾಗೂ ಸೂಪರ್‌ವೈಸರ್‌ಗಳಿಂದ ಎದುರಿಸುವ ದೌರ್ಜನ್ಯಗಳಿಗೂ ಮತ್ತು ಕಾರ್ಮಿಕರ ಈ ರೀತಿಯ ಸಾವುಗಳಿಗೂ ಹತ್ತಿರದ ಸಂಬಂಧವಿದೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಇದಕ್ಕೆ ಉದಾಹರಣೆ, ಈ ಕೆಳಗೆ ದಾಖಲಿಸಿರುವ ಕೆಲವು ಪ್ರಕರಣಗಳು. ಇದಲ್ಲದೆ, ಈ ರೀತಿಯ ದುರಂತಗಳಿಗೆ, ಅವರ ಬಡತನ, ಕಡಿಮೆ ವೇತನವೂ ಸಹ ಹತ್ತಿರದ ಸಂಬಂಧ ಹೊಂದಿದೆ. ಬಾಲಕಾರ್ಮಿಕ ಪದ್ಧತಿಯನ್ನು ಕಡ್ಡಾಯವಾಗಿ ರದ್ದು ಪಡಿಸಿದ್ದರೂ, ಇನ್ನೂ ಕಾರ್ಖಾನೆಗಳಲ್ಲಿ 18 ವರ್ಷಕ್ಕಿಂತ ಕಡಿಮೆ ಇರುವ ಹೆಣ್ಣುಮಕ್ಕಳು ಕಂಡು ಬರುತ್ತಿದ್ದಾರೆ.

ಕಾರ್ಖಾನೆಗಳಲ್ಲಿ ದಿನನಿತ್ಯವೂ ವಿವಿಧ ಬಗೆಯಲ್ಲಿ ದೌರ್ಜನ್ಯ ಅನ್ಯಾಯಗಳನ್ನು ಎದುರಿಸುತ್ತಿರುವ ಹಲವಾರು ಪ್ರಕರಣಗಳ ವಿವರ ಗಳನ್ನು ಈ ಕೆಳಗೆ ನೀಡಲಾಗಿದೆ.

**ಕಾರ್ಖಾನೆಯಲ್ಲಿಯೇ ಆತ್ಮಹತ್ಯೆ**

'ಅಮ್ಮು' 25 ವರ್ಷದ ಯುವ ಗಾರ್ಮೆಂಟ್ಸ್ ಕಾರ್ಮಿಕ ಮಹಿಳೆ, ಕಾರ್ಖಾನೆಯ ಶೌಚಾಲಯದಲ್ಲಿಯೇ ನೇಣು ಬಿಗಿದು ಆತ್ಮಹತ್ಯೆ ಮಾಡಿಕೊಂಡ ದುರಂತದ ಘಟನೆ ಫೆಬ್ರವರಿ 10, 2007 ರಂದು ನಡೆದಿತ್ತು. ಈ ಘಟನೆ ಬೆಳಕಿಗೆ ಬಂದದ್ದು ದಿನಾಂಕ 13 ರಂದು. ದಿನಾಂಕ 14 ರಂದು 'ವಿಜಯ ಕರ್ನಾಟಕ' ದಿನಪತ್ರಿಕೆಯು, ಕಾರ್ಖಾನೆಯ ಸೂಪರ್‌ವೈಸರ್ ಒಬ್ಬರು ನೀಡುತ್ತಿದ್ದ ಲೈಂಗಿಕ ಕಿರುಕುಳದ ಸಲುವಾಗಿ ಅಮ್ಮು ಆತ್ಮಹತ್ಯೆ ಮಾಡಿಕೊಂಡಿದ್ದಾರೆ ಎಂದು ದಾಖಲಿಸಿತ್ತು. ಪ್ರಜಾವಾಣಿ ಪತ್ರಿಕೆಯು ಅಮ್ಮುವಿಗೆ ಕಾರ್ಖಾನೆಯ ಪುರುಷ ಸಹೋದ್ಯೋಗಿಯೊಬ್ಬರು ಸತತವಾಗಿ ಕಿರುಕುಳ ನೀಡುತ್ತಿದ್ದರು ಎಂದು ವರದಿ ಮಾಡಿತ್ತು.

ಎರಡು ಚಿಕ್ಕ ಮಕ್ಕಳ ತಾಯಿಯಾದ 'ಅಮ್ಮು' ನಂದಿನಿ ಲೇಔಟ್‌ನ ಸ್ಲಮ್‌ನ ನಿವಾಸಿಯಾಗಿದ್ದರು.

ಅಮ್ಮುವಿನ ಸಹ ಕಾರ್ಮಿಕರ ಪ್ರಕಾರ ಘಟನೆ ನಡೆದ ದಿನ, ಸುಮಾರು 2.00 ಗಂಟೆಯ ಹೊತ್ತಿಗೆ ಪ್ರೊಡಕ್ಷನ್ ಸರಿಯಾಗಿ ಬರುತ್ತಿಲ್ಲವೆಂದು ಪುರುಷ ಫ್ಲೋರ್ ಇನ್‌ಚಾರ್ಜ್ ಒಬ್ಬರು ಅಮ್ಮುವಿಗೆ ಅವಾಚ್ಯವಾಗಿ ನಿಂದಿಸಿದ್ದರು. ಅಂತಹ ವಾತಾವರಣದಲ್ಲಿ ತನಗೆ ಕೆಲಸ ಮಾಡಲು ಆಗುವುದಿಲ್ಲವೆಂಬ ಹತಾಶೆಯನ್ನು ಅಮ್ಮು ಕಾರ್ಖಾನೆಯ ಶೌಚಾಲಯದಲ್ಲಿಯೇ ನೇಣು ಹಾಕಿಕೊಳ್ಳುವ ಮೂಲಕ ತೋರಿಸಿದ್ದರು. ಸಹೋದ್ಯೋಗಿಗಳ ಪ್ರಕಾರ ತನ್ನ ಸಾವಿಗೆ ಏನು ಕಾರಣ ಎಂದು ಅಮ್ಮು ತನ್ನ ಅಂಗೈಯ ಮೇಲೆ ಬರೆದುಕೊಂಡೂ ಇದ್ದರು.

ಈ ಘಟನೆಯ ಬಗ್ಗೆ ಹಲವು ಸಾಮಾಜಿಕ ಸಂಘಟನೆಗಳು ಸೇರಿ ಸತ್ಯಶೋಧನಾ ಸಮಿತಿಯನ್ನು ರಚಿಸಿ ತನಿಖೆ ನಡೆಸಿದ್ದರು. ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆಯೂ ಸೇರಿದಂತೆ, ಹಲವಾರು ಸಂಘಟನೆಗಳನ್ನೊಳಗೊಂಡ 'ಗಾರ್ಮೆಂಟ್ಸ್ ಕಾರ್ಮಿಕರ ಹಕ್ಕುಗಳಿಗಾಗಿ ಜಂಟಿ ಕ್ರಿಯಾಸಮಿತಿ'ಯು ಗಾರ್ಮೆಂಟ್ಸ್ ಕಾರ್ಖಾನೆ ಗಳಲ್ಲಿ ಕಾರ್ಮಿಕರಿಗೆ ಎಲ್ಲ ರೀತಿಯ ರಕ್ಷಣೆ ಹಾಗೂ ಭದ್ರತೆಗಳನ್ನು ಒದಗಿಸಬೇಕು ಎಂದು ಕಾರ್ಮಿಕ ಸಚಿವರಿಗೆ ಜ್ಞಾಪನಾ ಪತ್ರವನ್ನು ಸಲ್ಲಿಸಿಯಾಗಿದೆ.

**ಜೀವ ಕಳೆದುಕೊಂಡ 18 ವರ್ಷದ ರೇಣುಕಾ**

ದಿನಾಂಕ 12.10.2007ರಂದು, ಪೀಣ್ಯ ಗೊರಗುಂಟೆಪಾಳ್ಯ ದಲ್ಲಿರುವ ಗೋಕುಲ್‌ದಾಸ್ ಎಕ್ಸ್‌ಪೋರ್ಟ್ಸ್ ಸಮೂಹದ ಘಟಕವಾದ, ಟ್ರೈಯಾಂಗಲ್ ಅಪರೆಲ್ಸ್-5 ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ರೇಣುಕಾ ಎಂಬ 18 ವರ್ಷದ ಯುವತಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆ. ಹಾಜರಾತಿಗೆ ಸಂಬಂಧಿಸಿದ ಅತಿ ಸಣ್ಣ ಸಮಸ್ಯೆಯ ಕಾರಣಕ್ಕಾಗಿ ಕಾರ್ಖಾನೆಯ ಜನರಲ್ ಮ್ಯಾನೇಜರ್ ಹಾಗೂ ಮ್ಯಾನೇಜರ್ ಇಬ್ಬರೂ ಅವಳನ್ನು ಕಠೋರವಾಗಿ ಶಿಕ್ಷಿಸಿದ್ದಾರೆ. ಶಿಕ್ಷೆಯ ರೂಪದಲ್ಲಿ ಅವಳನ್ನು ಪೂರ್ತಿ ಅರ್ಧದಿನ ಸೆಕ್ಯೂರಿಟಿಯ ಹತ್ತಿರ ನಿಲ್ಲಿಸಿ, ಯಾವುದೇ ಕೆಲಸ ನೀಡದೆ, ನಂತರ ಕಾರ್ಖಾನೆಯಿಂದ ಹೊರ ಹೋಗುವಂತೆ ತಿಳಿಸಿದ್ದಾರೆ. ಮಧ್ಯಾಹ್ನ 3 ಗಂಟೆಯ ಸುಮಾರಿಗೆ ಅಲ್ಲಿಂದ ಹೊರಟ ರೇಣುಕಾ ಪೀಣ್ಯದಲ್ಲಿರುವ ತನ್ನ ಮನೆಗೆ ಬಂದು ನೇಣಿಗೆ ಶರಣಾಗಿದ್ದಾಳೆ. ಗಾರ್ಮೆಂಟ್ಸ್ ಕಾರ್ಖಾನೆಯೊಂದರಲ್ಲಿ ದುಡಿಯುತ್ತಿರುವ ಅವಳ ತಾಯಿ ಸಂಜೆ ಮನೆಗೆ ಬಂದು ಮಗಳು ಮೃತಪಟ್ಟಿರುವುದನ್ನು ನೋಡಿದರು. ಅಸ್ವಾಭಾವಿಕ ಸಾವು ಎಂದು ರಾಜಗೋಪಾಲ ನಗರದಲ್ಲಿ ಮೊಕದ್ದಮೆ ದಾಖಲಾಗಿದೆ.

ರೇಣುಕಾಳ ಸಾವಿಗೆ ಕಾರಣರಾದವರನ್ನು ಕೂಡಲೇ ಶಿಕ್ಷೆಗೆ ಗುರಿಪಡಿಸಬೇಕೆಂದು ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ

ಹಾಗೂ ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್ ಪ್ರತಿಭಟನೆ ನಡೆಸಿದವು. ವಿಮೋಚನಾ ಮಹಿಳಾ ಸಂಘಟನೆಯು ಕಾರ್ಖಾನೆಗಳಲ್ಲಿ ಮಹಿಳಾ ಕಾರ್ಮಿಕರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ವಿರೋಧಿಸಲು 'ವಿಮೆನ್ ಇನ್ ಬ್ಲಾಕ್' ಪ್ರತಿಭಟನೆಯನ್ನೂ ನಡೆಸಿತು.

### ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮೇಲೆ ಹಲ್ಲೆ

ಎಲ್ಲರನ್ನೂ ದಿಗ್ಭ್ರಮೆಗೊಳಿಸುವಂತಹ ಅಮಾನವೀಯ ರೀತಿಯಲ್ಲಿ ಗಾರ್ಮೆಂಟ್ಸ್ ಕಾರ್ಮಿಕ ಮಹಿಳೆಯ ಮೇಲೆ ಹಲ್ಲೆಯಾದ ಘಟನೆ 2005 ರಲ್ಲಿ ವರದಿಯಗಿತ್ತು. ಸಾಕಮ್ಮ ಎಂಬ ಮಹಿಳಾ ಕಾರ್ಮಿಕರು, ಜೂನ್ 6, 2005ರಂದು, ತಾವು ಕೆಲಸ ಮಾಡುತ್ತಿದ್ದ ಟೆಕ್ಸ್‌ಪೋರ್ಟ್ಸ್ ಕ್ರಿಯೇಶನ್ಸ್‌ನ ಪ್ರೊಡಕ್ಷನ್ ಮ್ಯಾನೇಜರ್‌ನಿಂದ ಹಲ್ಲೆಗೊಳಗಾಗಿದ್ದರು.

35 ವರ್ಷದ ಸಾಕಮ್ಮ ಅವರು ಕೆಲಸದಲ್ಲಿ ತುಂಬಾ ನಿಧಾನ ಎಂದು ಕಾರ್ಖಾನೆಯ ಸೂಪರ್‌ವೈಸರ್‌ಗಳು, ಹಾಗೂ ಅಸಿಸ್ಟೆಂಟ್ ಪ್ರೊಡಕ್ಷನ್ ಮ್ಯಾನೇಜರ್ ಇಬ್ಬರೂ, ತಮ್ಮ ಕ್ಯಾಬಿನ್‌ಗೆ ಕರೆಸಿ ಸಾಕಮ್ಮ ಅವರನ್ನು ಅವಾಚ್ಯ ಶಬ್ದಗಳಿಂದ ನಿಂದಿಸಿದ್ದರು. ಕಳೆದ ಒಂದು ವಾರದಿಂದ ಅನಾರೋಗ್ಯದಿಂದ ಬಳಲುತ್ತಿದ್ದ ಸಾಕಮ್ಮ ತಮ್ಮ ಮೇಲಿನ ಅಕಾರಣ ನಿಂದನೆಗಾಗಿ ಪ್ರತಿಭಟಿಸಿದ್ದರು ಹಾಗೂ ಮೇಲಾಧಿಕಾರಿಗಳಿಗೆ ದೂರು ನೀಡುವುದಾಗಿ ಹೇಳಿದ್ದರು.

ಆದರೆ ಸಾಕಮ್ಮ, ಮೇಲಾಧಿಕಾರಿಯಾದ ಪ್ರೊಡಕ್ಷನ್ ಮ್ಯಾನೇಜರ್ ನಾಗರಾಜ್‌ರವರಿಗೆ ಈ ವಿಷಯ ತಿಳಿಸಲು ಹೋದಾಗ ಅವರು ಕೋಪೋದ್ರಿಕ್ತರಾಗಿ, ಸಾಕಮ್ಮನವರ ಕುತ್ತಿಗೆ ಹಿಡಿದು ಆಚೆಗೆ ದಬ್ಬಿಕೊಂಡೇ ಬಂದು, ಅವರನ್ನು ಸೆಕ್ಯೂರಿಟಿ ರೂಮ್‌ನಲ್ಲಿರಿಸಿ, ಅವರ ಮೇಲೆ ಕಾವಲಿಟ್ಟಿದ್ದರು. ಸಾಕಮ್ಮ ಬೇಡಿಕೊಂಡರೂ ಅವರಿಗೆ ನೀರು ಊಟ ಸಹ ನೀಡಿರಲಿಲ್ಲ. ಸಂಜೆ ಸೆಕ್ಯೂರಿಟಿಯವರಿಂದ ತಪ್ಪಿಸಿಕೊಂಡು ತನ್ನ ಸಹಕಾರ್ಮಿಕರ ಬಳಿ ಬಂದ ಸಾಕಮ್ಮ ಅಲ್ಲಿಯೇ ನಿತ್ರಾಣರಾಗಿ ಕುಸಿದು ಬಿದ್ದಿದ್ದರು.

ತಕ್ಷಣ ಸಹಕಾರ್ಮಿಕರು ಹತ್ತಿರದ ಬ್ಯಾಟರಾಯನ ಪುರ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿ, ಅವರ ಸಲಹೆಯ ಮೇರೆಗೆ ವಿಕ್ಟೋರಿಯಾ ಆಸ್ಪತ್ರೆಯಲ್ಲಿ ಚಿಕಿತ್ಸೆ ಸಹ ಕೊಡಿಸಿದರು. ಎಫ್.ಐ.ಆರ್‌ನಲ್ಲಿ ಭಾರತೀಯ ದಂಡ ಸಂಹಿತೆ ಸೆಕ್ಷನ್ 342 ಹಾಗೂ 509 ಅಡಿಯಲ್ಲಿ ಕೇಸ್ ದಾಖಲಾಗಿತ್ತು.

'ಗಾರ್ಮೆಂಟ್ಸ್ ಕಾರ್ಮಿಕರ ಹಕ್ಕುಗಳಿಗಾಗಿ ದಕ್ಷಿಣ ಭಾರತ ಒಕ್ಕೂಟ'ದ ಮೂಲಕ ಈ ಬಗ್ಗೆ ಸಾಮಾಜಿಕ ಸಂಘಟನೆಗಳು ಒಟ್ಟಾಗಿ, ಸಂಬಂಧ ಪಟ್ಟವರು ಇದರ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಬಹಿರಂಗವಾಗಿ ಆಗ್ರಹಿಸಿದ್ದವು.

ಜುಲೈ 31, 2003 ರಲ್ಲಿ ಕರ್ನಾಟಕ ರಾಜ್ಯ ಮಹಿಳಾ ಆಯೋಗಕ್ಕೆ, ವಿದ್ಯಾ ಕ್ರಿಯೇಷನ್ಸ್‌ನ ಕೆಲವು ಕಾರ್ಮಿಕರು ತಮ್ಮ ಆಡಳಿತವರ್ಗದವರಿಂದ ಕಾರ್ಮಿಕ ಹಕ್ಕುಗಳು ಹಾಗೂ ಮಾನವ ಹಕ್ಕುಗಳ ಉಲ್ಲಂಘನೆಯಾಗುತ್ತಿವೆ ಎಂದು ಆರೋಪಿಸಿ ಪತ್ರ ಬರೆದಿದ್ದರು. ಆ ಪತ್ರದಲ್ಲಿರುವ ದೂರುಗಳು ಈ ಕೆಳಕಂಡಂತೆ ಇವೆ :

- ಯಾವುದೇ ಹೆಚ್ಚುವರಿ ಭತ್ಯೆ ಇಲ್ಲದೆ, 8 ಗಂಟೆಗಿಂತ ಹೆಚ್ಚು ಕೆಲಸ ಮಾಡಬೇಕೆಂದು ಒತ್ತಾಯಿಸುವುದು,
- ಕಾರ್ಮಿಕರಿಗೆ ಕಾನೂನು ಬದ್ಧವಾಗಿ ಸಿಗಬೇಕಾದ ರಜೆಯನ್ನು ನಿರಾಕರಿಸುವುದು
- ಒಂದು ದಿನ ರಜೆ ತೆಗೆದುಕೊಂಡದ್ದಕ್ಕಾಗಿ ಗರ್ಭಿಣಿಯಾಗಿದ್ದ ಫೀಡಿಂಗ್ ಹೆಲ್ಪರ್ ಒಬ್ಬರನ್ನು ಐರನಿಂಗ್ ಸೆಕ್ಷನ್‌ಗೆ ಶಿಕ್ಷೆಯ ರೂಪದಲ್ಲಿ ವರ್ಗಾಯಿಸಿರುವುದು.




- ನಿಗದಿ ಪಡಿಸಿದ್ದ ಪ್ರೊಡಕ್ಷನ್ ಅನ್ನು ನೀಡಲು ವಿಫಲರಾದುದಕ್ಕೆ ಮಹಿಳಾ ಕಾರ್ಮಿಕರೊಬ್ಬರನ್ನು ಪೂರ್ತಿ ಮೂರು ದಿನಗಳ ಕಾಲ ಪ್ರೊಡಕ್ಷನ್ ಡಿಪಾರ್ಟ್‌ಮೆಂಟ್‌ನಲ್ಲಿ ಎಲ್ಲರ ಎದುರಿಗೆ ನಿಂತಿರುವ ಶಿಕ್ಷೆ ನೀಡಿರುವುದು.
- ಪ್ರೊಡಕ್ಷನ್ ಮ್ಯಾನೇಜರ್‌ರವರ ವಿರುದ್ಧ ಮಾತನಾಡಲು ಎಲ್ಲರು ಹೆದರುತ್ತಾರೆ. ಪದೇ ಪದೇ ಅವರು 'ಪೊಲೀಸಿನವರು, ಲೇಬರ್ ಡಿಪಾರ್ಟ್‌ಮೆಂಟ್‌ನಲ್ಲಿರುವವರು, ಗೂಂಡಾಗಳು "ತನ್ನ ಜೇಬಿನಲ್ಲಿದ್ದಾರೆ" ಎಂದು ಹೆದರಿಸುವುದು ಈ ಭಯಕ್ಕೆ ಕಾರಣ.
- ಕಾರ್ಮಿಕರಿಗೆ ಬೋನಸ್ ನೀಡದಿರುವುದು
- ಮಹಿಳೆಯರು ಎಂಬ ಉದ್ದೇಶವನ್ನಿಟ್ಟುಕೊಂಡು ಹಲವು ಅವಾಚ್ಯ ಶಬ್ದಗಳಿಂದ ಬೈಯುತ್ತಿರುವುದು.

ಈ ವಿಷಯಕ್ಕೆ ಸಂಬಂಧ ಪಟ್ಟಂತೆ, ಮಹಿಳಾ ಆಯೋಗದ ಸದಸ್ಯ ಕಾರ್ಯದರ್ಶಿಗಳಾದ ಶ್ರೀಮತಿ ಬಿ.ಬಿ ಕಾವೇರಿಯವರು ಕಾರ್ಮಿಕ ಇಲಾಖೆಯ ಸಹಯೋಗದಲ್ಲಿ ಕಾರ್ಖಾನೆಗೆ ಭೇಟಿ ನೀಡಿ ಕಾರ್ಮಿಕರನ್ನು ಸಂದರ್ಶಿಸಿ, ಈ ಬಗ್ಗೆ ತಕ್ಷಣವೇ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಆಡಳಿತವರ್ಗದವರಿಗೆ ಸೂಚನೆ ನೀಡಿದ್ದರು. ಮುಂದಿನ ಎರಡು ತಿಂಗಳಲ್ಲಿ ಪ್ರೊಡಕ್ಷನ್ ಮ್ಯಾನೇಜರ್‌ರವರನ್ನು ಕೆಲಸದಿಂದ ತೆಗೆದುಹಾಕಲಾಗಿತ್ತು.

### ವಿದ್ಯುತ್ ಆಘಾತ

ಟೆಕ್ಸ್‌ಪೋರ್ಟ್ ಕ್ರಿಯೇಷನ್ ಕಾರ್ಖಾನೆಯಲ್ಲಿ ನವೆಂಬರ್ 19, 2004ರಂದು ಎಚ್.ಎನ್ ನಾಗರತ್ನ ಎಂಬ ಕಾರ್ಮಿಕ ಮಹಿಳೆಗೆ, ಕೆಲಸ ಮಾಡುತ್ತಿರುವಾಗ ವಿದ್ಯುತ್ ಆಘಾತವಾಗಿತ್ತು. ಪ್ರಜ್ಞೆ ತಪ್ಪಿ ಬಿದ್ದ ಅವರನ್ನು ತಕ್ಷಣವೇ ಹತ್ತಿರದ ಆಸ್ಪತ್ರೆಗೆ ದಾಖಲು ಮಾಡಲಾಗಿತ್ತು. ಮೂರು ದಿನಗಳ ಕಾಲ ಚಿಕಿತ್ಸೆ ನೀಡಿ ಅವರನ್ನು ಬಿಡುಗಡೆ ಮಾಡಿದರೂ ವಿದ್ಯುದಾಘಾತದಿಂದ ಅವರ ಬಲಗೈ ಕೆಲಸ ಮಾಡಲು ಅಶಕ್ತವಾಗಿತ್ತು.

ನಾಗರತ್ನ ಒಂದು ತಿಂಗಳು ರಜೆ ತೆಗೆದುಕೊಂಡು ನಂತರ ಕೆಲಸಕ್ಕೆ ಬಂದಾಗ ಅವರಿಗೆ ಕೆಲಸ ನಿರಾಕರಿಸಲಾಯಿತು ಹಾಗೂ ಬಲವಂತವಾಗಿ ಅವರಿಂದ ರಾಜೀನಾಮೆ ಪಡೆಯಲಾಯಿತು.

ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ 'ಮುನ್ನಡೆ' ಸಂಘಟನೆಯು ಕಾರ್ಖಾನೆಗಳ ಪರಿವೀಕ್ಷರರ ಇಲಾಖೆಗೆ ಈ ಬಗ್ಗೆ ದೂರು ನೀಡಿ ಕ್ರಮ ಕೈಗೊಳ್ಳಬೇಕೆಂದು ಆಗ್ರಹಿಸಿತ್ತು. ಕಾರ್ಖಾನೆಯನ್ನು ಪರಿವೀಕ್ಷಿಸಿದ ಅಧಿಕಾರಿಗಳು ಕಾರ್ಮಿಕರ ದೂರಿಗೆ ಯಾವುದೇ ಆಧಾರಗಳಿಲ್ಲ ಎಂದು ಹೇಳಿ ಜಾರಿಕೊಂಡಿತ್ತು. ನಂತರ ಪ್ರತಿಯೊಂದು ವಿವರವನ್ನೂ ಮತ್ತೆ ಅವರಿಗೆ ಒದಗಿಸಲಾಯಿತು. ಅನಂತರ ಕಾರ್ಖಾನೆಗೆ ಸೂಕ್ತ ಸ್ವಿಚ್ ಬೋರ್ಡ್‌ಗಳನ್ನು ಅಳವಡಿಸಿ ಎಂದು ಮಾತ್ರ ಹೇಳಿ ಇಲಾಖೆ ಈ ವಿಚಾರವನ್ನು ಮುಕ್ತಾಯಗೊಳಿಸಿತ್ತು.

ಕಾರ್ಖಾನೆಯಲ್ಲಿ ಸುರಕ್ಷೆ ಮತ್ತು ಭದ್ರತೆಗಳಿಲ್ಲದಿರುವುದರಿಂದ 23 ವರ್ಷದ ನಾಗರತ್ನಳ ಬಲಗೈ ಅಶಕ್ತಗೊಂಡಿತು. ಇನ್ನು ಜೀವನವಿಡೀ ಆ ಚಿಕ್ಕವಯಸ್ಸಿನ ಕಾರ್ಮಿಕ ಯುವತಿ ತೊಂದರೆ ಅನುಭವಿಸುವುದು ಅನಿವಾರ್ಯ.

**ರಜಾ ನಿರಾಕರಿಸಿದರು; ಕಾರ್ಮಿಕ ಮಹಿಳೆಯ ಪ್ರಸವ**

ಕಾರ್ಖಾನೆಯ ಆಡಳಿತವರ್ಗದ ದಿವ್ಯ ನಿರ್ಲಕ್ಷ್ಯದಿಂದಾಗಿ, ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ತುಂಬು ಗರ್ಭಿಣಿ ಶ್ರೀಮತಿ **ಆರ್** ರವರು ಕಾರ್ಖಾನೆಯ ಗೇಟ್ ಬಳಿಯೇ ತನ್ನ ಮಗುವಿಗೆ ಜನ್ಮ ನೀಡಿದ ಘಟನೆ ದಿನಾಂಕ ಮಾರ್ಚ್ 29, 2007ರಂದು ನಡೆದಿತ್ತು. ಆಕೆ ಆ ಮಗುವನ್ನು ತನ್ನ ಸೀರೆಯಲ್ಲಿಯೇ ಸುತ್ತಿ ತೆವಳುತ್ತಾ, ಆಟೋ ರಿಕ್ಷಾದಲ್ಲಿ ಮನೆಗೆ ತೆರಳುವ ಹೊತ್ತಿಗೆ ಮಗು ಮೃತ ಪಟ್ಟಿತ್ತು. ಪ್ರಮುಖ ಬ್ರಾಂಡ್ ಒಂದರ ಮಕ್ಕಳ ಬಟ್ಟೆಗಳನ್ನು ಈ ಕಾರ್ಖಾನೆಯು ತಯಾರಿಸುತ್ತಿತ್ತು. ಜಗತ್ತಿನ ಇತರ ಮಕ್ಕಳಿಗೆ ಬಟ್ಟೆ ಹೊಲೆಯುವ ತಾಯಿಯೊಬ್ಬಳು ತನ್ನ ಮಗುವನ್ನು ಕಾರ್ಖಾನೆಯ ಆಡಳಿತವರ್ಗದವರ ದಿವ್ಯನಿರ್ಲಕ್ಷ್ಯದಿಂದ ಕಳೆದುಕೊಂಡಳು ಎಂಬುದು ಎಲ್ಲರನ್ನು ವಿಚಲಿತ ಗೊಳಿಸುವಂತಹ ಸಂಗತಿಯಾಗಿತ್ತು.

ಆ ಕಾರ್ಖಾನೆಯಲ್ಲಿ 9 ವರ್ಷದಿಂದ ಕೆಲಸ ಮಾಡುತ್ತಿದ್ದ **ಆರ್** ರವರು ತುಂಬು ಗರ್ಭಿಣಿಯಾಗಿದ್ದರು. ಅಂದೂ ಎಂದಿನಂತೆ ಕೆಲಸಕ್ಕೆ ಬಂದಿದ್ದಾಗ, ಬೆಳಿಗ್ಗೆ 11 ಗಂಟೆಯ ಹೊತ್ತಿಗೆ ವಿಪರೀತವಾದ ಹೆರಿಗೆ ನೋವು ಕಾಣಿಸಿಕೊಂಡಿತು. ಆದರೆ ಅವರ ಈ ವೇದನೆಯನ್ನು ನೋಡಿದ ಮೇಲೂ ಪ್ರೊಡಕ್ಷನ್ ಮ್ಯಾನೇಜರ್ ಆಗಲೀ ಇತರರಾಗಲೀ ಅವರಿಗೆ ತಕ್ಷಣದ ಆಸ್ಪತ್ರೆಯ ವ್ಯವಸ್ಥೆ ಮಾಡಲಿಲ್ಲ. ಮನೆಗೆ ಹೋಗಲು ಜೊತೆಯಲ್ಲಿ ಯಾರನ್ನಾದರೂ ಕಳಿಸಿಕೊಡಿ ಎಂದರೂ ಅವರ ಮನಕರಗಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ರಜೆ ಫಾರಮ್‌ಅನ್ನು ತುಂಬಲು ಅಲ್ಲಿ ಇಲ್ಲಿ ಓಡಾಡಿಸಿ ಸಮಯವನ್ನು ವ್ಯರ್ಥಗೊಳಿಸಿದರು. ಈ ಎಲ್ಲಾ ಪ್ರಕ್ರಿಯೆ ಮುಗಿಯುವ ಹೊತ್ತಿಗೆ ಮಧ್ಯಾಹ್ನ 12.45 ಆಗಿತ್ತು. **ಆರ್** ರವರು ಕಾರ್ಖಾನೆಯ ಗೇಟ್ ಬಳಿ ಬಂದಾಗ ಅವರಿಗೆ ಅಲ್ಲಿಯೇ ಹೆರಿಗೆಯಾಗಿ ಬಿಟ್ಟಿತು.

ತಕ್ಷಣವೇ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆಯ ಕಾರ್ಯಕರ್ತರು, ಆರ್ ರವರನ್ನು ಇ.ಎಸ್.ಐ ಗೆ ಕರೆದೊಯ್ದು ಸೂಕ್ತ ಚಿಕಿತ್ಸೆ ಕೊಡಿಸಿದರು. ಬೆಂಗಳೂರಿನಲ್ಲಿರುವ ಮಹಿಳೆಯರ ಹಕ್ಕುಗಳಿಗಾಗಿ ಕೆಲಸ ಮಾಡುವ ಸಂಸ್ಥೆಯಾದ 'ವಿಮೋಚನಾ'ಗೆ **ಆರ್**. ರವರು ಮುನ್ನಡೆಯ ಸಹಾಯದಿಂದ ದೂರು ನೀಡಿದ್ದರು. ಅದನ್ನು ನಂತರ ಮಹಿಳಾ ಆಯೋಗಕ್ಕೆ ವರ್ಗಾಯಿಸಲಾಯಿತು. ನಂತರ ಆಡಳಿತವರ್ಗದವರು ಆರ್ ರವರಿಗೆ ನಿರ್ದಿಷ್ಟ ಮೊತ್ತದ ಹಣವನ್ನು ಪರಿಹಾರವನ್ನಾಗಿ ನೀಡಬೇಕಾಯಿತು.




**ಮಹಿಳಾ ಕಾರ್ಮಿಕರ ಮೇಲೆ ಹಲ್ಲೆ**

ಬಾಂಬೆ ರೆಯಾನ್ಸ್, ಉಡುಪು ತಯಾರಿಕೆಯಲ್ಲಿ ಪ್ರಮುಖ ಕಾರ್ಖಾನೆಯಾಗಿದ್ದು, ಪ್ರಮುಖ ಬ್ರಾಂಡ್‌ಗಳಾದ ಗ್ಯಾಪ್, ಟೆಸ್ಕೊ, ಎಚ್ ಅಂಡ್ ಎಮ್ ಮುಂತಾದುವುಗಳಿಗೆ ಉಡುಪು ತಯಾರಿಸುತ್ತದೆ. ಈ ಕಾರ್ಖಾನೆಯಲ್ಲಿ ಕಾರ್ಮಿಕ ಹಕ್ಕುಗಳು ಹಾಗೂ ಮಾನವ ಹಕ್ಕುಗಳು ಉಲ್ಲಂಘನೆಯಾಗುತ್ತಲೇ ಇರುತ್ತವೆ.

ಕಾರ್ಖಾನೆಯ ಮ್ಯಾನೇಜರ್‌ಗಳು ಮೂವರು ಮಂದಿ ಮಹಿಳಾ ಕಾರ್ಮಿಕರನ್ನು ಡಿಸೆಂಬರ್ 12, 2008ರಂದು ಕ್ಯಾಬಿನ್‌ಗೆ ಕರೆಸಿ ಅವರ ಮೇಲೆ ಹಲ್ಲೆ ಮಾಡುವುದರ ಮೂಲಕ ಕಾರ್ಮಿಕ ಹಕ್ಕುಗಳು ಹಾಗೂ ಮಾನವ ಹಕ್ಕುಗಳನ್ನು ಉಲ್ಲಂಘಿಸುವ ನಿಟ್ಟಿನಲ್ಲಿ ಕಾರ್ಖಾನೆಯು ಇನ್ನೂ ಒಂದು ಹೆಜ್ಜೆ ಮುಂದೆ ಇಟ್ಟಿತ್ತು. ಯಮುನಾ 35 ವರ್ಷ, ಮಲ್ಲಿಕಾ 34 ವರ್ಷ ಮತ್ತು ಉಮಾದೇವಿ 37 ವರ್ಷ ಇವರೆಲ್ಲರೂ ಈ ಕಾರ್ಖಾನೆಯ ಕಾರ್ಮಿಕರು ಹಾಗೂ ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್‌ನ ಸಕ್ರಿಯ ಕಾರ್ಯಕರ್ತರು. ಇವರನ್ನು ದಿನಾಂಕ 12ರಂದು ಬೆಳಿಗ್ಗೆ ಕೆಲಸಕ್ಕೆ ಬಂದೊಡನೆ ಫ್ಯಾಕ್ಟರಿ ಮ್ಯಾನೇಜರ್‌ಗಳು ಕ್ಯಾಬಿನ್‌ಗೆ ಬರಬೇಕೆಂದು ಕರೆಯಿಸಿ, ಸಂಜೆಯ ವರೆಗೂ ಕ್ಯಾಬಿನ್‌ನಲ್ಲಿಯೇ ಇರಬೇಕೆಂದು ನಿರ್ಬಂಧಿಸಿದ್ದಾರೆ. ಸಂಜೆಯ ವರೆಗೂ ಕ್ಯಾಬಿನ್‌ನಲ್ಲಿ ಬಂಧಿತರಾದ ಅವರಿಗೆ ನಾಲ್ಕು ಜನ ಮ್ಯಾನೇಜರ್‌ಗಳು, ನೀವೇನಾದರೂ ಕಾರ್ಮಿಕ ಹಕ್ಕುಗಳ ಬಗ್ಗೆ ಕಾರ್ಮಿಕರಿಗೆ ತಿಳಿವಳಿಕೆ ಕೊಟ್ಟರೆ ನಿಮಗೆ ಏನು ಮಾಡಬೇಕೆಂದು ಗೊತ್ತು ಎಂದು ಬೆದರಿಕೆ ಒಡ್ಡಿದ್ದಾರೆ. ಇವರನ್ನು ಕೂಡಿಹಾಕಿದ್ದ ಬಗ್ಗೆ ಆತಂಕಗೊಂಡಿದ್ದ ಇತರ ಸಹೋದ್ಯೋಗಿಗಳು ಅವರನ್ನು ಹೊರಗೆ ಬಿಡುವಂತೆ ಆಗ್ರಹಿಸಿದ್ದರು. ನಂತರ ಅವರೆಲ್ಲರ ಮೇಲೂ ಶಿಸ್ತು ಕ್ರಮ ಜರುಗಿಸಲಾಯಿತು.

ಇದಾದ ಹತ್ತು ತಿಂಗಳಿಗೇ (ಅಕ್ಟೋಬರ್ 2009) ಮತ್ತೊಮ್ಮೆ ಇದೇ ಕಾರ್ಮಿಕರ ಮೇಲೆ ಸೂಪರ್‌ವೈಸರ್‌ರವರಿಂದ ಹಲ್ಲೆ ನಡೆದು, ಪೊಲೀಸ್ ಠಾಣೆಯಲ್ಲಿ ದೂರು ದಾಖಲಾಗಿ, ಈಗ ಕಾರ್ಖಾನೆಯ ಒಳಗೇ 29 ಮಂದಿ ಕಾರ್ಮಿಕರಿಗೆ ಆಂತರಿಕ ವಿಚಾರಣೆ ನಡೆಯುತ್ತಿದೆ.

2007ರ ಏಪ್ರಿಲ್ 12 ರಂದು ಗಾಯತ್ರಿ ಎಂಬ ಕಾರ್ಮಿಕ ಯುವತಿಯೊಬ್ಬರು ಕಾರ್ಖಾನೆಯ ಬಸ್ ಡಿಕ್ಕಿ ಹೊಡೆದು, ಕಾರ್ಖಾನೆಯ ಮುಂದೆಯೇ ಸಾವನ್ನಪ್ಪಿದ್ದರು. ಈ ಸಾವಿಗಾಗಿ ಯೂನಿಯನ್‌ನಿಂದ ಏರ್ಪಡಿಸಿದ್ದ ಶ್ರದ್ಧಾಂಜಲಿ ಕಾರ್ಯಕ್ರಮದ ಮೇಲೆ ಕಂಪನಿಯಿಂದ ಆಯೋಜಿತರಾದ ಗೂಂಡಾಗಳು ಆಕ್ರಮಣ ನಡೆಸಿದ್ದರು. ಕಾರ್ಖಾನೆಯ ಈ ನಡವಳಿಕೆಯ ಬಗ್ಗೆ ಯೂನಿಯನ್ ಹಲವಾರು ಬಾರಿ ಮಾನವ ಹಕ್ಕು ಆಯೋಗ, ಕಾರ್ಮಿಕ ಇಲಾಖೆ, ಮಹಿಳಾ ಆಯೋಗಗಳಲ್ಲಿ ದೂರು ದಾಖಲಿಸಿದೆ.

**ಏನು ಕಾರಣ?**

ಗಾರ್ಮೆಂಟ್ಸ್‌ಗಳಲ್ಲಿ ಮಹಿಳೆಯರು ದಿನನಿತ್ಯ ಅನುಭವಿಸುತ್ತಿರುವ ಈ ಮೇಲಿನ ಪ್ರಕರಣಗಳು ಕೇವಲ ಉದಾಹರಣೆಗಳು ಅಷ್ಟೇ. ಇದರೊಂದಿಗೇ ಇತ್ತೀಚಿನ ದಿನಗಳಲ್ಲಿ "ಗಾರ್ಮೆಂಟ್ಸ್ ಕಾರ್ಮಿಕ ಮಹಿಳೆ ನೇಣಿಗೆ ಶರಣು" "ಗಾರ್ಮೆಂಟ್ಸ್ ಕಾರ್ಮಿಕರ ಅಸಹಜ ಸಾವು" ಎಂಬ ಸುದ್ದಿಗಳು ಪತ್ರಿಕೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಿವೆ.

'ಅಮ್ಮು' ಅಥವಾ 'ರೇಣುಕಾ'ಳ ಪರಿಸ್ಥಿತಿಯನ್ನು ಗಮನಿಸಿದರೆ ಕಾರ್ಖಾನೆಯಲ್ಲಿ ಮಹಿಳಾ ಕಾರ್ಮಿಕರು ಎಷ್ಟು ಕೆಲಸದ ಒತ್ತಡವನ್ನು

ಅನುಭವಿಸುತ್ತಿದ್ದಾರೆ ಎಂದು ಸ್ಪಷ್ಟವಾಗಿ ತಿಳಿಯುತ್ತದೆ. ಜೀವನ ನಿರ್ವಹಣೆಗೆ ಈ ಉದ್ಯೋಗವನ್ನೇ ಅವಲಂಬಿಸಿ, ಕುಟುಂಬದ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುವ ಈ ಮಹಿಳೆಯರು ಸ್ವಾಭಾವಿಕವಾಗಿಯೇ ಮಾನಸಿಕ ಒತ್ತಡದಲ್ಲಿರುತ್ತಾರೆ. ಆದರೆ ಕಾರ್ಖಾನೆಗಳಲ್ಲಿ, ಅವೈಜ್ಞಾನಿಕ ಪದ್ಧತಿಯ ಪ್ರೊಡಕ್ಷನ್ ಟಾರ್ಗೆಟ್, ಪುರುಷ ಸೂಪರ್‌ವೈಸರ್‌ಗಳ ಕೆಟ್ಟ ಬೈಗುಳ, ಅಪಮಾನ ಎಲ್ಲವೂ ಅವರಲ್ಲಿ ಮತ್ತಷ್ಟು ಒತ್ತಡ ತುಂಬುತ್ತವೆ.

ಕಾರ್ಖಾನೆಯಲ್ಲಿ ಸರಿಯಾದ ಕಾರ್ಮಿಕ ಕಾನೂನುಗಳನ್ನು ಪಾಲಿಸದಿರುವುದು, ಹೆಚ್ಚಿನ ಹೊತ್ತು ದುಡಿಸಿಕೊಳ್ಳುವುದು, ಎಲ್ಲರ ಮುಂದೆ ಕಾರ್ಮಿಕರಿಗೆ ಅವಮಾನ ಮಾಡುವುದು, ಇವೆಲ್ಲವೂ ಕಾನೂನು ಬಾಹಿರ. ಈ ರೀತಿಯ ಘಟನೆಗಳು ಕಾರ್ಖಾನೆಯಲ್ಲಿ ಅಥವಾ ಹೊರಗೆ ಎಲ್ಲಿ ಸಂಭವಿಸಿದರೂ ತೆರೆಯ ಮರೆಯಲ್ಲಿಯೇ ಉಳಿದು ಬಿಡುತ್ತಿವೆ. ತಮ್ಮ ಕಾರ್ಖಾನೆಯ ಕಾರ್ಮಿಕರೊಬ್ಬರು ಆತ್ಮಹತ್ಯೆಯಂತಹ ಕಠಿಣ ನಿರ್ಧಾರ ತೆಗೆದುಕೊಂಡರೆಂದರೆ, ಕಾರ್ಖಾನೆಯ ಮಾಲೀಕರು ಕನಿಷ್ಠ ಮಾನವೀಯ ನೆಲೆಯಲ್ಲಿಯಾದರೂ ಅದರ ಹೊಣೆಯ ಪಾಲನ್ನು ಹೊತ್ತುಕೊಂಡು, ಘಟನೆಗೆ ತಮ್ಮ ಕಾರಣ ಕಂಡು ಬಂದರೆ ಅದಕ್ಕೆ ತಕ್ಕ ಪರಿಹಾರ ನೀಡಿ ಮುಂದೆ ಆ ರೀತಿ ನಡೆಯದಂತೆ ನೋಡಿಕೊಳ್ಳಬೇಕಾಗಿದೆ. ಆ ಕಾರ್ಮಿಕರಿಗೆ ಇರುವ ಸಮಸ್ಯೆಯನ್ನು ಹಾಗೂ ಅದರ ಹಿನ್ನೆಲೆಯನ್ನು ಕಾರ್ಮಿಕ ಇಲಾಖೆಗಳು, ಸರ್ಕಾರ, ಹಾಗೂ ಅಧಿಕಾರಿಗಳು ಗಂಭೀರವಾಗಿ ಪರಿಗಣಿಸಲೇಬೇಕಾಗುತ್ತದೆ.

### ಗಾರ್ಮೆಂಟ್ ಉದ್ಯಮ ಮತ್ತು ಕಾರ್ಮಿಕರ ಪರಿಸ್ಥಿತಿ

ಇಂದು ಕೃಷಿ ಉದ್ಯಮ ಬಿಟ್ಟರೆ, ನಗರ ಪ್ರದೇಶದಲ್ಲಿ ಅತಿ ದೊಡ್ಡ ಮಟ್ಟದಲ್ಲಿ ಉದ್ಯೋಗ ಒದಗಿಸಿರುವುದು ಗಾರ್ಮೆಂಟ್ಸ್ ಉದ್ಯಮ. ಪ್ರಮುಖ ವಿದೇಶೀ ಬ್ರಾಂಡ್‌ಗಳಿಗೆ ಉಡುಪುಗಳನ್ನು ತಯಾರಿಸಿ ರಫ್ತು ಮಾಡುವ ಈ ಉದ್ಯಮದಲ್ಲಿ ದುಡಿಯುವ ಕಾರ್ಮಿಕರಲ್ಲಿ ಶೇಕಡಾ 90 ಭಾಗ ಮಹಿಳೆಯರೇ ಆಗಿದ್ದಾರೆ. ಬೆಂಗಳೂರಿನ ಮೈಸೂರು ರಸ್ತೆ, ಪೀಣ್ಯ ಕೈಗಾರಿಕಾ ಪ್ರದೇಶ, ಬೊಮ್ಮನಹಳ್ಳಿ ಕೈಗಾರಿಕಾ ಪ್ರದೇಶದಲ್ಲಿ ಹೆಚ್ಚಾಗಿ ನೆಲೆಯಾಗಿರುವ ಈ ಉದ್ಯಮದಲ್ಲಿ ಸುಮಾರು 5 ಲಕ್ಷ ಕಾರ್ಮಿಕರು ಪ್ರತ್ಯಕ್ಷವಾಗಿ ದುಡಿಯುತ್ತಿದ್ದಾರೆ.

ಗಾರ್ಮೆಂಟ್ಸ್ ಕಾರ್ಮಿಕರಿಗೆ ಕಾನೂನಿನ ಪ್ರಕಾರ 'ಕಾರ್ಖಾನೆಯ ಕಾಯಿದೆ'ಗಳು ಅನ್ವಯವಾದರೂ ಅದೊಂದೂ ಕಾರ್ಮಿಕರ ರಕ್ಷಣೆ ಮಾಡುತ್ತಿಲ್ಲ. ಕಾರ್ಮಿಕ ಕಾನೂನುಗಳನ್ನು ಸಮರ್ಪಕವಾಗಿ ಜಾರಿಗೊಳಿಸುವಲ್ಲಿ ಕಾರ್ಮಿಕ ಇಲಾಖೆ ಸಂಪೂರ್ಣ ವಿಫಲವಾಗಿದೆ. ಇದಕ್ಕೆ ಮತ್ತೊಂದು ಪ್ರಮುಖ ಕಾರಣ ಉದ್ಯಮದಲ್ಲಿ ಕಾರ್ಮಿಕರ ರಕ್ಷಣೆಗಾಗಿ ಇರಬೇಕಾದ ಪ್ರಭಾವೀ ಯೂನಿಯನ್‌ನ ಕೊರತೆ ಎಂದೂ ಹೇಳಬಹುದು. 90 ಭಾಗ ಮಹಿಳೆಯರೇ, ಅದರಲ್ಲೂ ಗ್ರಾಮಾಂತರ ಪ್ರದೇಶಗಳಿಂದ ವಲಸೆ ಬಂದಿರುವ ಈ ಹೆಣ್ಣುಮಕ್ಕಳು ಇಷ್ಟು ದಿನ ತಾವು 'ಕಾರ್ಮಿಕರು, ತಮಗೆ ಹಕ್ಕು ಇದೆ' ಎಂಬ ಭಾವನೆಯಿಂದ ವಂಚಿತರಾಗಿದ್ದು, ಈಗೀಗ ಸಂಘಟಿತರಾಗುವತ್ತ 'ಮುನ್ನಡೆ'ಯುತ್ತಿದ್ದಾರೆ. ಇದರ ಪರಿಣಾಮವೇ ಈ ಮೇಲಿನ ಪ್ರಕರಣಗಳನ್ನು ಬೆಳಕಿಗೆ ತಂದಿರುವುದು.

### ದೌರ್ಜನ್ಯ ತಡೆಗಟ್ಟುವತ್ತ 'ಮುನ್ನಡೆ'ಯ ಹೆಜ್ಜೆಗಳು

'ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ' ಸಂಘಟನೆಯು ಕಳೆದ ಆರು ವರ್ಷಗಳಿಂದ ಕಾರ್ಮಿಕರ ಮೇಲಾಗುವ ದೌರ್ಜನ್ಯಗಳನ್ನು ವಿರೋಧಿಸುತ್ತಾ ಹಲವಾರು ಚಟುವಟಿಕೆಗಳನ್ನು ನಡೆಸುತ್ತಲೇ ಬಂದಿದೆ. ಕಾರ್ಖಾನೆಯಲ್ಲಿ ಹಾಗೂ ಕಾರ್ಖಾನೆಯ ಹೊರಗೆ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ರಕ್ಷಣೆಗೆ ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಹಾಗೂ



ಕಾರ್ಖಾನೆಗಳಲ್ಲಿ ಬಾಲಕಾರ್ಮಿಕರನ್ನು ನೇಮಿಸಿಕೊಳ್ಳುವುದನ್ನು ತಡೆಗಟ್ಟಬೇಕೆಂದು ಹಲವಾರು ಬಾರಿ ಕರ್ನಾಟಕ ಸರ್ಕಾರ, ಬೆಂಗಳೂರು ಪೊಲೀಸರು, ಕಾರ್ಮಿಕ ಇಲಾಖೆ, ಕರ್ನಾಟಕ ರಾಜ್ಯ ಮಹಿಳಾ ಆಯೋಗ ಹಾಗೂ ಕರ್ನಾಟಕ ಮಕ್ಕಳ ಹಕ್ಕು ರಕ್ಷಣಾ ಆಯೋಗಗಳನ್ನು ಸಹ ಒತ್ತಾಯಿಸುತ್ತಲೇ ಬರುತ್ತಿದೆ.

ಬೆಂಗಳೂರು ನಗರದಲ್ಲಿರುವ ಬಹುದೊಡ್ಡ ಪ್ರಮಾಣದ ಗಾರ್ಮೆಂಟ್ ಕಾರ್ಮಿಕರ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವುದಕ್ಕಾಗಿ, ಸಿವಿಡೆಪ್–ಇಂಡಿಯಾದಂತಹ ಸ್ವಯಂ ಸೇವಾ ಸಂಸ್ಥೆಗಳು, ಮಾನವ ಹಕ್ಕುಗಳ ಸಂಸ್ಥೆಗಳು, ಕಾರ್ಯಕರ್ತರು, ಮಹಿಳಾ ಸಂಘಟನೆಗಳು, ಮಹಿಳಾ ಚಳವಳಿಯ ಕಾರ್ಯಕರ್ತರು, ವಕೀಲರು, ಬರಹಗಾರರು, ಗಾರ್ಮೆಂಟ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್, ಕಾರ್ಮಿಕ ಸಂಘಟನೆಗಳು ಕೆಲಸ ಮಾಡುತ್ತಲೇ ಬಂದಿವೆ. ಸಮಾಜದ ಅವಗಣನೆಗೆ ಪಾತ್ರರಾಗಿದ್ದ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಶೋಚನೀಯ ಪರಿಸ್ಥಿತಿಯನ್ನು ಬೆಳಕಿಗೆ ತಂದು, ಅವರ ಬಗ್ಗೆ ಸ್ವಲ್ಪವಾದರೂ ಸರ್ಕಾರದ, ಸಮಾಜದ ಗಮನ ಸೆಳೆಯುವಲ್ಲಿ ಈ ಎಲ್ಲಾ ಸಂಘ ಸಂಸ್ಥೆಗಳ ಪಾಲು ಬಹು ದೊಡ್ಡದು.

ಇವರೆಲ್ಲರ ಬೆಂಬಲದಿಂದಾಗಿಯೇ ಕನಿಷ್ಠ ಪಕ್ಷ ದೌರ್ಜನ್ಯಗಳು ನಡೆದಂತಹ ಸಂದರ್ಭದಲ್ಲಿ ಎಲ್ಲವನ್ನು ಅಲ್ಲದಿದ್ದರೂ ಕೆಲವನ್ನಾದರೂ ವಿರೋಧಿಸಿ ಹಲವಾರು ಚಟುವಟಿಕೆ ನಡೆಸುವುದಕ್ಕೆ 'ಮುನ್ನಡೆ'ಗೆ ಸಾಧ್ಯವಾಗಿದೆ.

ಈ ರೀತಿಯ ಆತ್ಮಹತ್ಯೆಗೆ ಯತ್ನಿಸುವವರು ಹಾಗೂ ಅಸಹಜ ರೀತಿಯಲ್ಲಿ ಸಾವನ್ನಪ್ಪುತ್ತಿರುವವರು ಹೆಚ್ಚಿನ ಮಂದಿ 18 ರಿಂದ 25ರ ಒಳಗಿನ ಹೆಣ್ಣುಮಕ್ಕಳು. ಮುಗ್ಧ ಯುವತಿಯರು ಯಾವುದೋ ಒಂದು ಕ್ಷುಲ್ಲಕ ಕಾರಣಕ್ಕೆ ಜೀವ ಕಳೆದುಕೊಳ್ಳದಂತೆ ತಡೆಯುವುದು 'ಮುನ್ನಡೆ'ಯ ಮುಂದಿರುವ ಸವಾಲಾಗಿದೆ. ಇದಲ್ಲದೆ ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರಿಗೆ ಕಾರ್ಖಾನೆಯ ಒಳಗೆ ಹಾಗೂ ಹೊರಗೆ ಸೂಕ್ತ ಭದ್ರತೆಯನ್ನು ಒದಗಿಸುವಂತಹ ವ್ಯವಸ್ಥೆಯನ್ನು ಸೃಷ್ಟಿಸುವುದೂ ಸಹ 'ಮುನ್ನಡೆ'ಯ ಹೊಣೆಯಾಗಿದೆ.

ಸಮಾಜದ ಎಲ್ಲ ವರ್ಗದ ಗಮನವನ್ನು ಇದರೆಡೆಗೆ ಸೆಳೆದು, ಈ ಉದ್ಯಮದ ಪ್ರಮುಖ ಪಾಲುದಾರರಾದ, ಮಾಲೀಕರು, ಸರ್ಕಾರ, ದೊಡ್ಡ ದೊಡ್ಡ ಅಂತಾರಾಷ್ಟ್ರೀಯ ಬ್ರಾಂಡ್‌ಗಳು, ಕಾರ್ಮಿಕ ಸಂಘಟನೆಗಳು, ಗ್ರಾಹಕರು ಎಲ್ಲರನ್ನೂ ಒಳಗೊಂಡು ಮಹಿಳಾ ಕಾರ್ಮಿಕರ ದೌರ್ಜನ್ಯದ ವಿರುದ್ಧ ಆಂದೋಲನ ನಡೆಸುವ ಆಶಯ, ಅನಿವಾರ್ಯತೆ ನಮ್ಮ ಮುಂದಿದೆ. ಬದಲಾವಣೆ ಎಂಬುದು ಸಮಗ್ರ ವ್ಯವಸ್ಥೆಯಲ್ಲಿ ಬರಬೇಕು ಎಂಬುದು ಮುನ್ನಡೆಯ ನಂಬಿಕೆಯಾಗಿದೆ.

❑

## ಮಹಿಳಾ ದಿನಾಚರಣೆಯ ಶತಮಾನೋತ್ಸವ :

# ಸಾಧನೆ ಸಂಭ್ರಮ ಸವಾಲುಗಳ ಎಚ್ಚರ

***ಮಲ್ಲಿಗೆ,*** *ಸಮಾನತಾ ಮಹಿಳಾ ವೇದಿಕೆ*

ಅಂತರರಾಷ್ಟ್ರೀಯ ದುಡಿಯುವ ಮಹಿಳಾ ದಿನಾಚರಣೆಯ ಶತಮಾನೋತ್ಸವವನ್ನು ಬೆಂಗಳೂರಿನ ಮಹಿಳಾ ಸಂಘಟನೆಗಳು ಒಟ್ಟಾಗಿ ಆಚರಿಸಿ, ಅದರ ಆಶಯವನ್ನು ಮತ್ತೊಮ್ಮೆ ಎತ್ತಿಹಿಡಿದರು. 1910ರ ಮಾರ್ಚ್ 8ರಂದು ಮೊಟ್ಟಮೊದಲ ಬಾರಿಗೆ ಘೋಷಿಸಲ್ಪಟ್ಟ 'ಮಹಿಳಾ ದಿನ'ವು ನೂರು ಆಚರಣೆಗಳನ್ನು ಕಂಡಿದೆ. 'ಮಹಿಳೆಯರೆಲ್ಲಾ ಒಂದಾಗಿ, ಹೋರಾಟಕ್ಕೆ ಮುಂದಾಗಿ' ಎನ್ನುವ ಮಹಿಳಾ ಚಳವಳಿಯ ಘೋಷಣೆಯನ್ನು ಈ ಶತಮಾನೋತ್ಸವದ ಸಂದರ್ಭದಲ್ಲಿ ಅರ್ಥಪೂರ್ಣವಾಗಿ ಅನ್ವಯಿಸಲಾಯಿತು.

ಬೆಂಗಳೂರು ಮತ್ತು ಕರ್ನಾಟಕದ ಇತರೆ ಭಾಗಗಳ ಸುಮಾರು 20 ಮಹಿಳಾ ಸಂಘಟನೆಗಳು ಹಾಗೂ ಮಹಿಳಾ ಪರರು ಸೇರಿ, ಮಹಿಳಾ ಹೋರಾಟ ಒಕ್ಕೂಟವನ್ನು ಇದಕ್ಕಾಗಿ ರಚಿಸಿಕೊಂಡರು. ಇಡೀ ಶತಮಾನೋತ್ಸವ ವರ್ಷದಲ್ಲಿ ಸೂಕ್ಷ್ಮ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದಕ್ಕಾಗಿ ಯೋಜನೆಗಳನ್ನು ರೂಪಿಸಲಾಯಿತು. ಅದರಂತೆ ಮಾರ್ಚ್ 7ರಂದು, 'ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಮುನ್ನಡೆ'ಯ ವಿಶೇಷ ಪ್ರಯತ್ನದೊಂದಿಗೆ ಮಹಿಳಾ ಒಕ್ಕೂಟದ ಅಡಿಯಲ್ಲಿ ಬೆಂಗಳೂರಿನ ಅಸಂಘಟಿತ ಮಹಿಳಾ ಕಾರ್ಮಿಕರ ಪ್ರತಿಭಟನಾ ಪ್ರದರ್ಶನ ಹಾಗೂ ಸಮಾವೇಶವನ್ನು ನಡೆಸಲಾಯಿತು. ಗಾರ್ಮೆಂಟ್ಸ್ ಕಾರ್ಮಿಕರು, ಪೌರಕಾರ್ಮಿಕರು, ಮನೆಗೆಲಸದ ಮಹಿಳೆಯರು, ಲೈಂಗಿಕ ಕಾರ್ಮಿಕರು, ಕಟ್ಟಡ ಕಾರ್ಮಿಕರು... ಹೀಗೆ ಬೆಂಗಳೂರಿನ ಎಲ್ಲಾ ಅಸಂಘಟಿತ ಕ್ಷೇತ್ರಗಳನ್ನು ಬೆವರಿನಿಂದ ತೋಯಿಸುತ್ತಾ ಪೋಷಿಸುತ್ತಿರುವ ಮಹಿಳೆಯರು ಅಲ್ಲಿದ್ದರು. ತಮ್ಮ ಸಮಸ್ಯೆಗಳನ್ನು ಹಂಚಿಕೊಳ್ಳುವುದರೊಂದಿಗೆ ಸಂಘಟಿತರಾಗುತ್ತಿರುವ ಸಂತೋಷವನ್ನು ವ್ಯಕ್ತಪಡಿಸಿದರು. ಪ್ರೊ. ಜಿ.ರಾಮಕೃಷ್ಣ, ಶ್ರೀ ಬಾಲಿನ್, ಸಿಸ್ಟರ್ ಸೀಲಿಯಾ, ಮೊದಲಾದ ಗಣ್ಯರು ಪಾಲ್ಗೊಂಡಿದ್ದರು.

ಮಾರ್ಚ್ 8ರಂದು ಬೆಂಗಳೂರಿನ ಪ್ರಮುಖ ನಾಲ್ಕು ವೃತ್ತಗಳಲ್ಲಿ ಮಹಿಳಾ ಹೋರಾಟ ಒಕ್ಕೂಟದ ಸಹಭಾಗಿ ಸಂಘಟನೆಗಳು, ಬೀದಿ ಸಭೆಗಳನ್ನು ನಡೆಸಿದವು. ಬೆಳಿಗ್ಗೆ 9ಕ್ಕೆ ಆರಂಭವಾಗಿ ಪೀಣ್ಯ 2ನೇ ಹಂತ, ಮಲ್ಲೇಶ್ವರಂ ವೃತ್ತ, ಮೈಸೂರುಬ್ಯಾಂಕ್ ವೃತ್ತ ಹಾಗೂ ಶಿವಾಜಿನಗರಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಸಭೆಗಳು ನಡೆದವು. ಅಂದಿನ ಸಂಜೆ ಅದು ಹರ್ಷೋಲ್ಲಾಸದ ಸಮಯ! ಮಹಿಳಾ ಚಳವಳಿಯ ಇಷ್ಟು ದೀರ್ಘಾವಧಿಯ ಪಯಣವನ್ನು, ಅದರ ಸಾಧನೆಗಳನ್ನು ಸ್ಮರಿಸುತ್ತಾ 'ಮಹಿಳಾ ಸಾಂಸ್ಕೃತಿಕ ಸಂಜೆ' ಸಂಭ್ರಮ, ಉತ್ಸಾಹದಿಂದ ನಡೆಯಿತು. ಅದೇ ಮೊದಲ ಬಾರಿಗೆ ವೇದಿಕೆ ಹತ್ತಿದ ಮನೆಕೆಲಸದ ಕಾರ್ಮಿಕರ ಯೂನಿಯನ್ನಿನ ಸದಸ್ಯರು. 'ಸಿಂಹದಂತೆ ಸಿಡಿದು ಬನ್ನಿ' ಎನ್ನುತ್ತಾ ಸಂಕೋಚ ಮುಜುಗರಗಳ ಪೊರೆ ಕಳಚುತ್ತಾ, ಕೋಲಾಟ ಆಡಿದರು. ಸೆಕ್ಸ್‌ವರ್ಕರ್ಸ್ ಯೂನಿಯನ್ನಿನ ಉತ್ಸಾಹ ಪೂರ್ಣ 'ಚೆಲ್ಲಿದರು ಮಲ್ಲಿಗೆಯಾ' ಸ್ವಾಗತನೃತ್ಯ, ಚಿತ್ರಾ ಅಯ್ಯರ್‌ರವರ ಸತ್ವ ಭರಿತ ಸ್ತ್ರೀವಾದಿ ಹಾಡುಗಳು, ಮುನ್ನಡೆಯ ಹೋರಾಟದ ಗೀತೆಗಳು ಸಂಚಯನೆಲೆ ತಂಡ 'ಲೆಸ್ಬಿಟ್‌ತಂಡ', ವಿದ್ಯಾವಾಹಿನಿ ಕಾಲೇಜಿನ ವಿದ್ಯಾರ್ಥಿಗಳ ತಂಡ, ಸಾಧನಾ ಮಹಿಳಾ ಸಂಘಟನೆಯ ತಂಡಗಳ ಬೀದಿನಾಟಕಗಳು ಗಮನಸೆಳೆದವು. ಕೊನೆಯದಾಗಿ ಮಾನವಿ ಕಲಾತಂಡದ ವಿಶಿಷ್ಟ ತಮಟೆ ನೃತ್ಯದ ತಾಳಕ್ಕೆ ಪ್ರೇಕ್ಷಕರೂ ಹೆಜ್ಜೆ ಸೇರಿಸುವುದರೊಂದಿಗೆ ಕಾರ್ಯಕ್ರಮ ಮುಕ್ತಾಯವಾಯಿತು.

ಮಾರ್ಚ್ 13ರಂದು 'ಜೆಂಡರ್ ಮತ್ತು ಲೈಂಗಿಕತೆ'ಯನ್ನು ಕುರಿತ ಕಾರ್ಯಾಗಾರದಲ್ಲಿ ಶುಭಾಚಾಕೋ ಮತ್ತು ಸ್ನೇಹಿತರು ಶಿಬಿರಾರ್ಥಿಗಳೊಂದಿಗೆ ವಿವರವಾದ ಚರ್ಚೆ ನಡೆಸಿದರು. ಸಾಕ್ಷ್ಯಚಿತ್ರ ಪ್ರದರ್ಶನ ಮತ್ತು ವಿಷಾಯಮಂಡನೆಗಳು ಭಾಗವಹಿಸಿದ್ದವರಲ್ಲಿ ಹೊಸತೊಂದು ನೋಟವನ್ನೇ ಮೂಡಿಸಿದವು.

ಪೆಡೆಸ್ಟ್ರಿಯನ್ ಪಿಕ್ಚರ್ಸ್ ತಂಡದ ಮುಂದಾಳತ್ವದಲ್ಲಿ ಮಹಿಳಾ ಹೋರಾಟ ಒಕ್ಕೂಟದ ಸಹಭಾಗಿತ್ವ ಮತ್ತು ವಾರ್ತಾ ಇಲಾಖೆಯ ನೆರವಿನೊಂದಿಗೆ, 3 ದಿನಗಳ 'ಮಹಿಳಾ ಚಿತ್ರೋತ್ಸವ' ಆ ವಾರದ ಕೊನೆಯಲ್ಲಿ ನಡೆಯಿತು. ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಪ್ರಾಧ್ಯಾಪಕಿ ಮಮತಾ ಜಿ. ಸಾಗರರು ಜನಪ್ರಿಯ ಸಿನೆಮಾಗಳಲ್ಲಿ ಮಹಿಳೆಯರು ಕುರಿತು ಪ್ರಸ್ತುತಪಡಿಸಿದ ಸಾಕ್ಷ್ಯಚಿತ್ರದೊಂದಿಗೆ ಈ ಕಾರ್ಯಕ್ರಮದ ಉದ್ಘಾಟನೆ ನಡೆಯಿತು. ಮೂರು ದಿನಗಳ ಕಾಲ ದೇಶೀಯ ಹಾಗೂ ಅಂತಾರಾಷ್ಟ್ರೀಯ ಮಟ್ಟದ ಅತ್ಯುತ್ತಮ ಮಹಿಳಾಪರ ಚಲನಚಿತ್ರ, ಸಾಕ್ಷ್ಯಚಿತ್ರಗಳು, ಪ್ರೇಕ್ಷಕರ ಮನಸೆಳೆಯುವುದರಲ್ಲಿ ಯಶಸ್ವಿಯಾದವು. ಮುಕ್ತಾಯ ಕಾರ್ಯಕ್ರಮವು ಖ್ಯಾತ ಸ್ತ್ರೀವಾದಿ ಚಿಂತಕಿ ಡಾ. ವಿಜಯಾ ಹಾಗೂ ಸುಚಿತ್ರಾ ಸಿನಿಮಾ ಮತ್ತು ಸಾಂಸ್ಕೃತಿಕ ಅಕಾಡಮಿಯ ಟ್ರಸ್ಟೀಗಳಾದ ವಿದ್ಯಾಶಂಕರ್‌ರವರ ಪ್ರಬುದ್ಧ ಅನಿಸಿಕೆ ಚರ್ಚೆಗಳು ಹಾಗೂ ಪ್ರೇಕ್ಷಕರ ಸಕ್ರಿಯ ಪಾಲ್ಗೊಳ್ಳುವಿಕೆಯೊಂದಿಗೆ ಅತ್ಯಂತ ಅರ್ಥಪೂರ್ಣವಾಗಿ ನಡೆಯಿತು.

ಮಾರ್ಚ್ ತಿಂಗಳ ಕಾರ್ಯಕ್ರಮಗಳ ಸರಣಿಯ ಕೊನೆಯ ಕಾರ್ಯಕ್ರಮ ದಿನಾಂಕ 22ರಂದು ನಡೆಯಿತು. ಹ್ಯೂಮನ್‌ರೈಟ್ಸ್ ಲಾ ನೆಟ್‌ವರ್ಕ್‌ನ ಬೆಂಗಳೂರು ವಿಭಾಗವು ಜವಾಬ್ದಾರಿ ಹೊತ್ತು ಏರ್ಪಡಿಸಿದ್ದ ಕಾನೂನು ಶಿಬಿರದಲ್ಲಿ ಒಕ್ಕೂಟದ ಸದಸ್ಯರು ಸಕ್ರಿಯವಾಗಿ ಪಾಲ್ಗೊಂಡರು. ಮಹಿಳೆಯರಿಗೆ ಆಸ್ತಿಹಕ್ಕು, ಕಾರ್ಮಿಕ ಕಾಯ್ದೆಗಳಲ್ಲಿ ಮಹಿಳೆಯರಿಗಿರುವ ಸೌಲಭ್ಯಗಳು, ವೈಯಕ್ತಿಕ ಕಾನೂನುಗಳು ಹಾಗೂ ಕೆಲಸದ ಸ್ಥಳದಲ್ಲಿ ಲೈಂಗಿಕ ಕಿರುಕುಳದ ಕುರಿತು, ಪರಿಣತರು ಉಪಯುಕ್ತ ಮಾಹಿತಿಗಳನ್ನು ನೀಡಿದರು. ಪಾಲ್ಗೊಂಡವರೆಲ್ಲರೂ ಸಾಮಾಜಿಕ ಕಾರ್ಯಕರ್ತರೆ ಆಗಿದ್ದು, ಎಲ್ಲರಿಗೂ ತಮ್ಮ ಗಮನಕ್ಕೆ ಬರುವ ಇಂತಹ ಸಮಸ್ಯೆಗಳಲ್ಲಿ



ನೆರವಾಗಲು ಇನ್ನಷ್ಟು ಸಲಕರಣೆಗಳು ದೊರೆತ ಅನುಭವವಾಯಿತು.

ಮಹಿಳಾ ಹೋರಾಟ ಒಕ್ಕೂಟದ ಆರಂಭದ ಸಭೆಗಳಲ್ಲೆ ಚರ್ಚೆಯಾದ್ದ, ಮತ್ತೊಂದು ಬಹುಮುಖ್ಯ ವಿಚಾರವೆಂದರೆ, ಕರ್ನಾಟಕದಲ್ಲಿ ಹೆಚ್ಚು ಹೆಚ್ಚು ನಡೆಯುತ್ತಿರುವ ದಲಿತಮಹಿಳೆಯರ ಮೇಲೆ ದೌರ್ಜನ್ಯದ ಪ್ರಕರಣಗಳು, ಫೆಬ್ರವರಿ 15ರಂದು ಚಿತ್ರದುರ್ಗದಲ್ಲಿ ಭಾಗ್ಯಮ್ಮ ಎಂಬ ದಲಿತ ಮಹಿಳೆ ಯರನ್ನು ಬೆತ್ತಲೆ ಮೆರವಣಿಗೆ ಮಾಡಿದ ಘಟನೆಯ ವಿರುದ್ಧ ನಡೆದ ಪ್ರತಿಭಟನೆಯಲ್ಲೂ ಒಕ್ಕೂಟ ಭಾಗವಹಿಸಿತ್ತು. ಹಾಗೆಯೇ ಈ ಕುರಿತು ಇನ್ನಷ್ಟು ಒತ್ತಡ ಹಾಕುವ ಉದ್ದೇಶದಿಂದ ಮಾರ್ಚ್ 27ರಂದು 'ಸಾರ್ವಜನಿಕ ವಿಚಾರಣೆ'ಯೊಂದನ್ನು ಹಮ್ಮಿಕೊಳ್ಳುವ ಯೋಜನೆಯಿತ್ತು. ಆದರೆ ಬೆಂಗಳೂರಿನಲ್ಲಿ ಚುನಾವಣೆಗಳ ಘೋಷಣೆಯಾದ ಹಿನ್ನೆಲೆಯಲ್ಲಿ ಅ ಕಾರ್ಯಕ್ರಮವನ್ನು ಮುಂದೂಡ ಲಾಗಿತ್ತು. ಭಾಗ್ಯಮ್ಮ ಮಾತ್ರವಲ್ಲದೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಹಲವಾರು ರೀತಿಯಲ್ಲಿ, ಅಮಾಯಕ ದಲಿತ ಮಹಿಳೆಯರು ದೌರ್ಜನ್ಯಕ್ಕೊಳ ಗಾಗುವುದು ಹೆಚ್ಚುತ್ತಲೇ ಇರುವುದರಿಂದ, ಈ ಕಾರ್ಯಕ್ರಮವನ್ನು ತಪ್ಪದೆ ನಡೆಸಬೇಕೆಂಬುದೇ ಒಕ್ಕೂಟದ ಎಲ್ಲರ ಅಭಿಪ್ರಾಯವಾಗಿತ್ತು. ಆದ್ದರಿಂದಲೇ ಚುನಾವಣೆಗಳ ನಂತರ ಈ ಕಾರ್ಯಕ್ರಮವನ್ನು ಪುನಃ ಯೋಜಿಸಿ ಮೇ 21ರಂದು ಹಮ್ಮಿಕೊಳ್ಳಲು ತೀರ್ಮಾನಿಸಲಾಯಿತು.

ಹೀಗೆ ಈ ಇಡೀ ವರ್ಷದಲ್ಲಿ ಮಹಿಳಾ ಚಳವಳಿಯ ಸಾಧನೆಯ ಪುಟಗಳನ್ನು ಪರಿಚಯಿಸು ವುದರೊಂದಿಗೆ ಈಗಲೂ ನಮ್ಮ ಮುಂದಿರುವ ಸವಾಲುಗಳ ಜವಾಬ್ದಾರಿ ಹೊರಲು ಸಜ್ಜುಗೊಳ್ಳುವ ದಿಕ್ಕಿನಲ್ಲಿ ಮಹಿಳಾ ಹೋರಾಟ ಒಕ್ಕೂಟದ ಪ್ರಯತ್ನ ಗಳು ಸಾಗುತ್ತಿವೆ. ❑

# ಪಿಸ್ತಾಷಿಯೋ ಐಸ್‌ಕ್ರೀಮ್

ಅರಬರು ನಕ್ಷತ್ರಗಳಿಗೆ ಹೆಸರಿಟ್ಟರೆಂದು
ಯಾರೋ ನನಗೆ ಹೇಳಿದರು
ಆಲ್ಗೋಲ್, ಸಿರಿಯಸ್, ಆಲ್ಡೆಬರಾನ್....
ಆಲಿವ್ ಆಕಾರದ ಅಮ್ಮನ ಕಣ್ಣುಗಳು
ಚಪ್ಪಲಿ ತೊಟ್ಟ ಅವಳ ಕಾಲು
ಶತ ಶತಮಾನಗಳ
ಬೃಹತ್ ಸಾಮ್ರಾಜ್ಯ,
ಮರೆತ ನಿಧಿಗಳತ್ತ ಒಯ್ದಿತು.
ಈಗದು, ಪಾಳು ಬೀಡು

ಇಂಥದೇ ಬೇಸಗೆಯಲ್ಲಿ
ಆಲಿವ್ ಎಣ್ಣೆ ಹಚ್ಚಿ, ಮಿಂದು,
ಜೆರುಸ್ಲೇಮ್‌ನ ರಸ್ತೆ ಬದಿಯಲ್ಲಿ
ಮುದುಕನೊಂದಿಗೆ
ಪಿಸ್ತಾಷಿಯೋ ಐಸ್‌ಕ್ರೀಮ್ ತಿನ್ನುವಾಗ
ಓಬೀರಾಯನ ಕಾಲದ ಅವನ ಮುಖ
ನಾವು ಹೃದಯೊಂದಿಗೆ ಹೋರಾಡಿದೆವು
ಬುದ್ಧಿಯಿಂದಲ್ಲ ಎಂದು ಹೇಳುವಂತಿತ್ತು -
ಹಾಗೆಂದೇ ಬಹುಶಃ ನಮಗೆ ಗೆಲುವಿಲ್ಲ.

ನನ್ನ ಬುಡಕಟ್ಟಿಗೆ ನಾನೆಂದೋ ಸತ್ತು ಹೋಗಿದ್ದೇನೆ
ಅದರ ರುಚಿ ಗುಟ್ಟುಗಳು ಅರ್ಥವಾಗುವುದಿಲ್ಲ
ವೇಗ, ಡೆನೆಬ್, ಅಲ್ಟೈರ್....
ಜೊತೆ ನಾನಿಂದು ಮಲಗುತ್ತೇನೆ.
ಇಲ್ಲವಾದರೆ ಬೆಳಿಗ್ಗೆ ಸೂರ್ಯನ ಕಂಡೊಡನೆ
ಅವು ಮಾಯಾವಾಗಿಬಿಡುತ್ತವೆ
ಮತ್ತಲ್ಲಿ ಉಳಿಯುವುದು
ಅದೇ ಪಾಳು ಬೀಡು

*ಅರಬ್ ಕವಯಿತ್ರಿ: ಆನ್‌ಮರಿ ಜಾಕಿರ್*
*ಅನು: ಎಂ.ಆರ್. ಕಮಲ*

# "ನಾವು ಗುಲಾಮರಲ್ಲ, ಕಾರ್ಮಿಕರು"!

## ಗೃಹಕಾರ್ಮಿಕರ ಒಕ್ಕೊರಲ ಘೋಷಣೆ

●ಗೀತಾ ಕೆ.ಜಿ. ಮತ್ತು ಜಯಸಿಂಹ ಆರ್.



"ನಾನು ನನ್ನ ತಂಗಿ ಇಬ್ರೂ ಆ ಮನೆಯಲ್ಲಿದ್ವಿ ಬೆಳಿಗ್ಗೇನೆ ಏಳ್ಬೇಕು ಆ ಅಂಕಲ್ ಕಾರ್ ತೊಳೀಬೇಕು ಹೇಳಿದ್ ಕೆಲ್ಸ ಮಾಡ್ಬೇಕು. ಇಲ್ಲಾಂದ್ರೆ ಹೊಡ್ಯೋರು. ಪಾತ್ರೆ ಬೆಳಗ್ಬೇಕು. ಬಟ್ಟೆ ಒಗಿಬೇಕು ತುಂಬಾ ಹೊಡ್ಯೋರು. ಆ ಅಂಕಲ್ ಬಂದ್ಮೇಲೆ ಕಾಲ್ ಒತ್ತಬೇಕಾಗಿತ್ತು. ಒತ್ತುತ್ತಿದ್ದೆ ಮನೆಯಿಂದ ಆಚೆ ಹೋಗ್ಬಾರ್ದು ಅಂತ ಹೇಳ್ತಿದ್ರು..." ಹೀಗೆ ಎಂಟು ವರ್ಷದ ಪುಟ್ಟ ಹುಡುಗಿ ಪ್ರಿಯಾ ಹೇಳ್ತಿದ್ದಾಗ ಎಂತಹ ಕಲ್ಲು ಹೃದಯವೂ ಕರಗಲೇಬೇಕು. ಗೃಹ ಕಾರ್ಮಿಕರ ಹಕ್ಕುಗಳ ಒಕ್ಕೂಟವು ಆಯೋಜಿಸಿದ್ದ ಬಹಿರಂಗ ಸಭೆಯಲ್ಲಿ ತಮ್ಮನ್ನು ತಾವು ಗೃಹ ಕಾರ್ಮಿಕರು ಎಂದು ಕರೆದುಕೊಳ್ಳುವ ಮಹಿಳೆಯರು ಮತ್ತು ಮನೆಗೆಲಸಕ್ಕೆ ಹಾಕಲ್ಪಟ್ಟ ಮಕ್ಕಳು ತಮ್ಮ ನೋವುಗಳನ್ನು ಸಮಸ್ಯೆಗಳನ್ನು ಸಭಿಕರೆದುರು ತೋಡಿಕೊಂಡರು.

ಸಂಸಾರ ನಿರ್ವಹಣೆಯ ಹೊಣೆ ಹೊತ್ತ ಬಡ ಮಹಿಳೆಯರು ಉಳ್ಳವರ (ಹಣ ಮಾತ್ರ)ಲ್ಲಿ ಮನೆಗೆಲಸಕ್ಕೆ ಸೇರಲೇಬೇಕಾದ ಅನಿವಾರ್ಯತೆಯಿದೆ. ಇವರಿಗೆ ಇತರೆ ಕಸುಬುಗಳನ್ನು ಗೊತ್ತಿಲ್ಲ ವಾದ್ದರಿಂದ ಮತ್ತು ಸಾಮಾನ್ಯವಾಗಿ ಉಳ್ಳವರು ತಮ್ಮ ಕೆಲಸಗಳನ್ನು ತಾವೇ ಮಾಡಿಕೊಳ್ಳಲು ಬಯಸದಿರುವುದರಿಂದ ಇಂತಹ ಉದ್ಯೋಗಾವಕಾಶಗಳು ಸೃಷ್ಟಿಯಾಗಿವೆ, ಆಗುತ್ತಿವೆ. ನಗರ ಪ್ರದೇಶದಲ್ಲಿ ಈ ರೀತಿ ನಿರ್ವಹಿಸುತ್ತಿರುವ ಸಾವಿರಾರು ಮಹಿಳೆಯರಿದ್ದಾರೆ. ಮೇಲ್ನೋಟಕ್ಕೆ ಕಾಣುವಂತೆ ಇವರದು ಮುಖ್ಯ ವಾಹಿನಿಗೆ ನಿಕಟವಾದ ಪ್ರಪಂಚ.

ಇದೇ ರೀತಿ ಮತ್ತೊಂದು ಪ್ರಪಂಚವಿದೆ, ಅದರ ಒಳ ಹೊಕ್ಕಷ್ಟು ಅಮಾನವೀಯವಾದ ವಿಕೃತ ಜಗತ್ತೊಂದು ತೆರೆದುಕೊಳ್ಳುತ್ತದೆ. ತಂದೆ-ತಾಯಿ ಇಲ್ಲದ ಅನಾಥ ಮಕ್ಕಳನ್ನು ಸಂಬಂಧಿತರು ಸಾಕಲಾರದೆಯೋ ಅಥವಾ ಹಣದಾಸೆಗೋ ತಂದು ನಗರ ಪ್ರದೇಶದಲ್ಲಿ ಕೆಲಸಕ್ಕೆ ಸೇರಿಸಿಬಿಡುತ್ತಾರೆ (ಅಕ್ಷರಶಃ ಮಾರಿಬಿಡುತ್ತಾರೆ). ಸ್ವತಃ ತಂದೆ ತಾಯಿಗಳೇ ಮಕ್ಕಳನ್ನು ಮನೆಗೆಲಸಕ್ಕೆ ಹಚ್ಚಿದ ಉದಾಹರಣೆಗಳೂ ಸಾಕಷ್ಟಿವೆ. placement ageing ಗಳ ಮೂಲಕ ಕೆಲಸಕ್ಕೆ (!) ಸಿಕ್ಕಿಕೊಂಡ ದೂರದೂರಿನ ಯುವತಿಯರು, (ಇವರೇ ಈ ಪ್ರಪಂಚದ ಕೇಂದ್ರ ಬಿಂದುಗಳು) ಅಪ್ಪ-ಅಮ್ಮನ ಹೆಸರೂ ಗೊತ್ತಿಲ್ಲದ ಮಕ್ಕಳು, ಭಾಷೆ ಗೊತ್ತಿಲ್ಲದ ಮನೆಯವರೊಂದಿಗೆ ಸಂಪರ್ಕ ಕಳೆದುಕೊಂಡ ಯುವತಿಯರು, ಯಾರೋ ಎಣಿಸಿಕೊಳ್ಳುವ ಸಂಬಳಕ್ಕೆ ಹಗಲು-ರಾತ್ರಿ ದುಡಿಯುವ ಇವರದ್ದೇ ಒಂದು ಚಿಕ್ಕ ಪ್ರಪಂಚ. ಹೌದು, ಇವರದು ಚಿಕ್ಕದೇ ಪ್ರಪಂಚ. ಕಾಂಕ್ರೀಟ್ ಕೋಟೆಯಂತಹ ಮನೆಗಳು, ಗೇಟಿನ ಬಳಿ ಕಾವಲುನಾಯಿ. ಮೈಮುರಿಯುವಷ್ಟು ಕೆಲಸ, ಮಾತು ಮಾತಿಗೂ ಉಗಿಯುವ, ಹೊಡೆಯುವ ಮಾಲೀಕರು, ಆಟದ ಸಾಮಾನಿನಂತೆ ಇವರನ್ನು ಬಳಸಿಕೊಳ್ಳುವ ಮನೆ ಮಕ್ಕಳು. ಒಂದೆರಡು ಹೊತ್ತು ತಂಗಳು, ಎಲ್ಲೋ ನಾಲ್ಕೈದು ತಾಸು ನಿದ್ದೆ, ಮಾಸಲು ಬಟ್ಟೆ ಆಗಾಗೊಮ್ಮೆ ಬೀಳುವ ಬರೆ, ಲೈಂಗಿಕ ದೌರ್ಜನ್ಯ, ಮನೆಯ ಮೂಲೆಯಲ್ಲಷ್ಟು ಕಾಲ್ಚಾಚಲು ಜಾಗ.... ಆಳಕ್ಕಿಳಿದಷ್ಟೂ ಕೆಂಪಕ್ಷರದಲ್ಲಿ ಬರೆಯಬೇಕಾದ ವಿಕೃತ ಜಗತ್ತಿದು. ದುರಂತವೆಂದರೆ ಈ ಜಗತ್ತಿನ ಸುಳಿವು ಕೂಡ ಮೇಲ್ನೋಟಕ್ಕೆ ಕಾಣುವುದಿಲ್ಲ. ಇವೆಲ್ಲಾ ಮನೆಗೆಲಸಕ್ಕೆಂದು ಮನೆಯಲ್ಲಿ ಉಳಿಸಿಕೊಂಡಿರುವ ಕೆಲಸಗಾರರೆಂಬ ಜೀತದಾಳುಗಳಿಗೆ ಸಂಬಂಧಿಸಿದ ವಿಚಾರಗಳು.

ಇನ್ನು ನಾಲ್ಕೈದು ಮನೆಗಳಲ್ಲಿ ದುಡಿಯುವ ಮಹಿಳೆಯರ ಸಮಸ್ಯೆಗಳೇ ಬೇರೆಯವು. ಇವರು ಮಾಡುವುದು ನಿಗದಿಪಡಿಸಿದಂತಹ ಕೆಲಸಗಳಾದರೂ, ಅವು ಹೆಚ್ಚಿನ ಪ್ರಮಾಣದ್ದಾಗಿರುತ್ತವೆ. ಕಡಿಮೆ ಸಂಬಳ, ಕೆಲಸ ಸರಿಯಾಗಿ ಮಾಡಿಲ್ಲವೆಂಬ ಮತ್ತು ಕಳ್ಳತನದ ಆರೋಪ, ಈ ತೆರನಾದ ಹಲವು ಸಮಸ್ಯೆಗಳು.

ರಾಮಯ್ಯ ಬಡಾವಣೆಯ ಉಳ್ಳವರ ಮನೆಯ ಬಟ್ಟೆ ಒಗೆಯುವ ಕೋಕಿಲಾರವರು ಕಳ್ಳತನದ ಆರೋಪಕ್ಕೆ ತುತ್ತಾದ ದುರ್ದೈವಿ. ಅವರೇ ಹೇಳುವಂತೆ, "ನಂಗೆ ಹುಷಾರಿಲ್ಲಿಲ್ಲಾಂತ ಓದ್ ಸೋಮ್ವಾರ ಕೆಲಸಕ್ಕೆ ಬರಲ್ಲ ಅಂತ ನನ್ನ ಮಗ್ನ ಕೈಲಿ ಕೇಳಿಕಳ್ಸಿದ್ದೆ. ಕೆಲಸಕ್ಕೆ ಬರ್ಲೇ ಬೇಕಂತ ಹೇಳಿಕಳ್ಸಿದ್ರು. ಹೋಗಿ ಕೆಲ್ಸ ಮಾಡಿ ಬಂದೆ. ಮತ್ತೆ ಎಂದಿನಂತೆ ಮಂಗ್ಳವಾರ ಕೆಲ್ಸಕ್ಕೋದಾಗ ಮಾಲೀಕರ ತಂಗಿ ಇದ್ರು, ನಾನು ಬಟ್ಟೆ ಒಗಿಯೋಕೆ ಮೇಲ್ ಹೋದೆ ಆಯಮ್ಮ ಹೊರಗೋದೋರು ಸ್ವಲ್ಪಹೊತ್‌ಬಿಟ್ಟು ಬಂದ್ರು. ನನ್ನನ್ನು ಕೆಳಗ್ ಕರುದ್ರು, ಕೆಳಗ್ ಜೀಪ್ ಇತ್ತು. ಅದ್ರಲ್ಲಿ ಹತ್ತಿಸ್ಕೊಂಡು ಹೋದ್ರು. ನಂಗೆ ಏನೂ ಗೊತ್ತಾಗ್ಲಿಲ್ಲ. ಆಮೇಲೆ ಪೊಲೀಸ್ ಸ್ಟೇಷನ್‌ಗೆ ಕರ್‍ಕೊಂಡ್ ಹೋದ್ರು, ಅಲ್ಲಿ ವಿಚಾರಣಾ ಕೊಠಡಿ ಅಂತ ಇತ್ತು. ಅಲ್ಲಿ ಇಬ್ರು ಪೊಲೀಸ್ರು, "ಒಡವೆ ಏನ್ ಮಾಡ್ದೆ ಎಂದ್ರು, "ನಂಗೇನೂ ಗೊತ್ತಿಲ್ಲಾ" ಅಂದೆ. ಕೈ ಮುಂದೆ ಮಾಡು ಅಂತ ಕೈಗೊಡುದ್ರು, ಮಂಡಿಗಾಲಿಗ್ ಹೊಡುದ್ರು. ನಂಗೇನೂ ಗೊತ್ತಿಲ್ಲಾಂದ್ರೂ ಹೊಡುದ್ರು, ನಾನು ಪೊಲೀಸ್ ಸ್ಟೇಷನ್‌ನಲ್ಲಿರೋದು ನಮ್ಮನೇಲ್ಯಾರಿಗೂ ಗೊತ್ತಿರ್ಲಿಲ್ಲ. ಸಂಜೆ 7 ಗಂಟೆಗೆ ಮನೆಗೂ ಬಂದು



ಎಲ್ಲಾ ಹುಡುಕುದ್ರು, ಅಲ್ಲೇನೂ ಸಿಗ್ಲಿಲ್ಲ. ಮತ್ತೆ ಸ್ಟೇಷನ್‌ಗೆ ಕರ್‍ಕೊಂಡೋಗಿ ವಾಪಸ್ ಕಳಿಸಿದ್ರು. ಅವತ್ತೇ ಸತ್ತೋಗ್ಬೇಕು ಅಂದ್ಕೊಂಡೆ. ಸತ್ತೋಗ್ಬಿಟ್ರೆ ಈ ಮಕ್ಳುಗೆ ಯಾರ್‌ಗತಿ ಅಂತ ಇದೀನಿ. ಇನ್ನೂ ನೋವಿದೆ. ಕೆಲ್ಸ ಮಾಡಕ್ಕಾಗಲ್ಲ. ನನ್ನ ಮಗೀನ್ ಕರ್‍ಕೊಂಡೋಗಿ ಅದ್ರ ಕೈಲಿ ಕೆಲ್ಸ ಮಾಡಿಸ್ತಿದೀನಿ...." ಹೀಗೆ ಕಳ್ಳತನದ ಆರೋಪ ಹೊತ್ತು ಅವಮಾನಕ್ಕೊಳಗಾದ ನೊಂದ ಮಹಿಳೆಯರ ಉದಾಹರಣೆಗಳು ಸಾಕಷ್ಟಿವೆ.

ಸಂಬಳ ಹೆಚ್ಚಿಸಿ ಎಂದು ಕೇಳಿ ಕೆಲಸ ಕಳೆದುಕೊಂಡವರು. ಹಲ್ಲೆಗೊಳ ದಾವರು, ಲೈಂಗಿಕ, ದೌರ್ಜನ್ಯಕ್ಕೊಳಗಾದವರು, ಮನೆಗೆ ಬಂದ ಅತಿಥಿಯ ಅಸಭ್ಯವರ್ತನೆಗೆ ಸಹಕರಿಸಲಿಲ್ಲವೆಂಬ ಕಾರಣಕ್ಕೆ ಕೆಲಸ ಕಳೆದುಕೊಂಡ ಅವರು, ಮೆಟ್ಟಿಲಿನಿಂದ ಕಾಲುಜಾರಿ ಬಿದ್ದು ಕಾಲು ಮುರಿದುಕೊಂಡು ಯಾವ ಪರಿಹಾರವೂ ಇಲ್ಲದೇ ಕೆಲಸ ಕಳೆದುಕೊಂಡ ಇಳಿವಯಸ್ಸಿನ ಜಯಮ್ಮ, Army campas ನಲ್ಲಿ ಮನೆ ಪಡೆದುಕೊಂಡಿರುವ ಕಾರಣಕ್ಕೆ ಮನೆಯ ಎಲ್ಲಾ ಕೆಲಸಗಳನ್ನು ನಿರ್ವಹಿಸಿದರೂ. ರೇಶನ್‌ಅನ್ನು ನೀಡದೆ ಕೇವಲ 200 ರೂ. ಸಂಬಳಕ್ಕೆ ದುಡಿಯುವ ಪದ್ಮಾ.... ಹೀಗೆ ಮನೆಗೆಲಸದಲ್ಲಿ ತೊಡಗಿರುವ ಮಹಿಳೆಯರ ಸಮಸ್ಯೆಗಳು ಸಾವಿರಾರು.

ಸಭೆಯ ಅಂತ್ಯದಲ್ಲಿ ಗೃಹಕಾರ್ಮಿಕರ ಅಭ್ಯುದಯಕ್ಕೆ ಅಗತ್ಯವಾದ ಕಾನೂನುಗಳು ಜಾರಿಯಾಗಬೇಕೆಂಬ ಕೂಗಿಗೆ ಹಿರಿಯವಕೀಲೆ ಹೇಮಲತಾ ಮಹಿಷಿ, ಎನ್.ಡಿ.ಟಿ.ವಿ.ಯ ವಾಸಂತಿ, ಆಟೋಚಾಲಕಿ ವೆಂಕಟಲಕ್ಷ್ಮಿ, ನ್ಯಾಷನಲ್ ಲಾ ಸ್ಕೂಲ್‌ನ ಸರಸುಥಾಮಸ್ ಮೊದಲಾದ ಗಣ್ಯರನ್ನೊಳಗೊಂಡ ತೀರ್ಪುಗಾರರ ಮಂಡಳಿಯಿಂದ ಬೆಂಬಲ ವ್ಯಕ್ತವಾಯಿತು. ಮಕ್ಕಳನ್ನು ಮನೆಗೆಲಸಕ್ಕೆ ಬಳಸಿಕೊಳ್ಳುವುದರ ಮೇಲೆ ನಿಷೇಧ ಹೇರಬೇಕು ಮತ್ತು ಈ ನಿಟ್ಟಿನಲ್ಲಿ ಮಾಧ್ಯಮಗಳು ಮತ್ತು ಸಂಘಟನೆಗಳು ಕೆಲಸ ಮಾಡಬೇಕೆಂಬುದು ತೀರ್ಪುಗಾರರ ಅಭಿಮತ. placement ageing ಗಳ ನೆರವು ಪಡೆಯದೇ ಮಾಲೀಕರು ಮತ್ತು ಕಾರ್ಮಿಕರ ನಡುವಿನ ಸಂಬಂಧ ಗಟ್ಟಿಯಾಗಬೇಕು. ಕನಿಷ್ಟ ವೇತನ, ರಜೆ, ಸಾಮಾಜಿಕ ಭದ್ರತೆಗಳನ್ನಾಧರಿಸಿದ ಕಾನೂನುಗಳ ರಚನೆಗೆ ಗಮನಹರಿಸಬೇಕಾಗಿದೆ. ಎಂಬುದು ಸರ್ಕಾರದ ಪ್ರತಿನಿಧಿಯ ಅಭಿಪ್ರಾಯ.

ನಗರದ ಪ್ರತಿಷ್ಠಿತ ಬಡಾವಣೆಗಳಲ್ಲೊಮ್ಮೆ ಬೆಳಿಗ್ಗೆ ಸುತ್ತಿ ಬಂದರೆ ಎಷ್ಟೆಲ್ಲಾ ಮಕ್ಕಳು ಮನೆಯ ಮುಂದೆ ಶುಚಿ ಮಾಡುತ್ತಿರುವ ಗಾಡಿಗಳನ್ನು ತೊಳೆಯುತ್ತಿರುವ ದೃಶ್ಯಗಳು ಕಣ್ಣಿಗೆ ನಾಟುತ್ತವೆ. ಅದೇ ಮಾಸಲು ಬಟ್ಟೆಗಳು ಕೆದರಿದ ಕೂದಲು, ಬಾಡಿದ ಮುಖ, ಸೂಕ್ಷ್ಮವಾಗಿ ಗಮನಿಸಿದರೆ ಹೊಡೆತ ತಿಂದ ಗುರುತುಗಳು ಕಾಣಬಹುದು.

ಮಕ್ಕಳನ್ನು ದೇವರ ಜೊತೆಯಲ್ಲಿಟ್ಟು ನೋಡುವ ಈ ಸಮಾಜದಲ್ಲಿ ಮಕ್ಕಳಿಂದ ಕಾಲನ್ನು ಒತ್ತಿಸಿಕೊಳ್ಳುವ ಮಹನೀಯರೂ(!) ಇದ್ದಾರೆ. ಮನೆಕೆಲಸದವರೆಂದರೆ ಸ್ವಾಭಿಮಾನವಿಲ್ಲದವರು, ಹಣಕ್ಕೆ ಆಸೆಪಡುವವರು, ಕಳ್ಳರು, ಭೋಗದ ವಸ್ತುಗಳು ಎಂಬ ತುಚ್ಛ ಭಾವವನ್ನು ಹೊಂದಿರುವ ಉಳ್ಳವರ ಅಜ್ಞಾನಕ್ಕೆ ಧಿಕ್ಕಾರವಿರಲಿ. ಇವನ್ನೆಲ್ಲಾ ತಿಳಿದೂ ಏನೂ ತಿಳಿಯದವರಂತೆ ಇರುವ ನೆರೆಹೊರೆಯವರಿಗೂ ಕಣ್ಮುಚ್ಚಿ ಕುಳಿತಿರುವ ಸರ್ಕಾರಕ್ಕೂ ಧಿಕ್ಕಾರವಿರಲಿ.

ಇಷ್ಟೆಲ್ಲಾ ಸಮಸ್ಯೆಗಳ ನಡುವೆಯೂ ಈ ಕಾರ್ಮಿಕರು ಮತ್ತು ಸಂಘಟಿತರಾಗುತ್ತಿರುವುದು ಮಹತ್ವದ ಸಂಗತಿ. ಸಂಘಟಿತರಾಗಬೇಕಾದ ಅನಿವಾರ್ಯತೆಯಿದೆ ಸಂಘಟಿತರಾದಲ್ಲಿ ಮಾತ್ರ ಅವರು ತಮ್ಮ ಹಕ್ಕುಗಳನ್ನು ಪಡೆದಾರು. ಈ ಕುರಿತು ಮಾಧ್ಯಮಗಳು, ಸಂಘಟನೆಗಳು ಜನರಲ್ಲಿ ಅರಿವನ್ನು ಮೂಡಿಸುವ ಕೆಲಸ ಮಾಡಬೇಕಿದೆ. ಹಾಗಾದಾಗ ಮಾತ್ರ ನೊಂದ ಜೀವಗಳು ನಲಿದಾವು. ಆಡುವ ವಯಸ್ಸಿನಲ್ಲಿ ದುಡಿಯುತ್ತಿರುವ ಭಾರತದ ಭವಿಷ್ಯದ ಹರಿಕಾರರು ಹೊಸ ದಿಕ್ಕಿನೆಡೆಗೆ ಹೆಜ್ಜೆ ಇಟ್ಟಾರು. ❑

## ಉಳಿದುಕೊಳ್ಳಲಿ ಒಂದಿಷ್ಟು

ಅಗೆದಷ್ಟು
ಇರುಳು,
ಮೊಗೆದಷ್ಟು
ಬೆಳಕು
ಉಳಿದುಕೊಳ್ಳಲಿ

ಒಂದಿಷ್ಟು...

ಇಲ್ಲ ನಿಯಮ,
ಅಗೆದು ಮೊಗೆದು
ಹರವಿಕೊಳ್ಳಲೇಬೇಕೆಂದು
ಎಲ್ಲ...

ಇರುಳ ನರಳಿಕೆಗೆ
ತುಟಿ ಹಿಡಿದ ಬೆರಳು,
ಅದ ಬೆರಗು
ನೆರಳಿಗೆ
ನಗು,
ಬೆಳಕಿಗೆ

ಎದೆಯೊಳಣ
ಕಾಂತಿಯೋ
ಮನದ ಭ್ರಾಂತಿಯೋ...
ಅಗೆದಷ್ಟು ಆಳ
ಮೊಗೆದಷ್ಟು ನಿರಾಳ
ಆದರೂ...

ಉಳಿದುಕೊಳ್ಳಲಿ

ಒಂದಿಷ್ಟು

• ಶ್ರೀದೇವಿ ಕಳಸದ

# ಸುರೇಖರ ವಿಡಿಯೊ - ಇನ್ಸ್ಟಲೇಷನ್ ಸರಣಿ:

*(ನಗರಕೇಂದ್ರಿತ ಹೆಣ್ಣಿನ ನವ-ವ್ಯಕ್ತಿತ್ವವೊಂದನ್ನು ರೂಪಿಸುವ ವಿಧಿವಿಧಾನ)*

● **ಎಚ್.ಎ. ಅನಿಲ್ ಕುಮಾರ್**



(ಅ) ಕಲಾವಿದೆ ಸುರೇಖರ ಒಂದು ವಿಡಿಯೊದಲ್ಲಿ (ಶೀರ್ಷಿಕೆ "ಮೊಮೆಂಟ್ ಆಫ್ ಸ್ಟ್ರೇಂಜ್ ಸ್ಟಿಲ್‌ನೆಸ್" ಅಥವ 'ವಿಕ್ಷಿಪ್ತ ಮೌನದ ಕ್ಷಣ', 2006, ಏಳು ನಿಮಿಷದ ವಿಡಿಯೊ) ಸ್ವತಃ ಅವರು ಬಿಳಿಯ ಜುಬ್ಬ ಧರಿಸಿ ಶ್ರೀಲಂಕಾದ ಕ್ಯಾಂಡಿಯ ರಸ್ತೆಯೊಂದರಲ್ಲಿ ನಿಶ್ಚಲವಾಗಿ ಕುಳಿತಿದ್ದಾರೆ. ಓಡಾಡುವ ಜನ, ವಾಹನಗಳೆಲ್ಲವೂ ಅವರ ಸುತ್ತಮುತ್ತಲೂ ಹಿಂದು ಮುಂದಾಗಿ ಓಡಾಡುತ್ತಿದ್ದಾರೆ/ವೆ. ವಿಡಿಯೊದೊಳಗಿನ ಜನ ಈ ಕಲಾವಿದೆಯನ್ನು ನೋಡುವ ಕ್ರಮವೂ ತಿರುವು ಮರುವಾಗಿದೆ.

(ಅ) ನಿಂತಿರುವ ವಾಹನಗಳು, (ಆ) ಕಲಾವಿದೆ; ಮತ್ತು (ಇ) ಹಿನ್ನೆಲೆಯಲ್ಲಿರುವ ಪ್ರಸಿದ್ಧ ಬೆಟ್ಟದ ಮೇಲಿನ ಬುದ್ಧನ ಮೂರ್ತಿ - ಇವುಗಳು ಮಾತ್ರ ಆ ಏಳೂ ನಿಮಿಷದಾದ್ಯಂತ ಸ್ಥಿರವಾಗಿರುತ್ತವೆ. ಅಂದರೆ ಈ ಮೂರು ಸ್ಥಿರ ಆಕಾರಗಳು ಸುತ್ತಲಿನ ಚಲನೆಯಿಂದಾಗಿ ಮಾತ್ರ ಸ್ಥಿರವೆಂದು ನಮಗೆ ಭಾಸವಾಗುತ್ತವೆ. ಮತ್ತು ಚಲನೆಯೂ ಸಹ ಒಮ್ಮೆಲೆ ಭೂತ ಹಾಗೂ ಭವಿಷ್ಯಗಳಲ್ಲಿ ಉಂಟಾಗು ವಂತಹುದೆಂದೂ ತೋರುತ್ತದೆ. ಇದಕ್ಕೆ ಕಾರಣ ಇಡೀ ವಿಡಿಯೋದೊಳಗಿನ ಆಗುಹೋಗುಗಳೆಲ್ಲವೂ ಕಾಲಚಕ್ರವನ್ನು ಒಮ್ಮೆ ಹಿಂದಕ್ಕೆ ಮತ್ತೊಮ್ಮೆ ಮುಂದಕ್ಕೆ ಒಯ್ಯುವಂತಿರುತ್ತದೆ. ಇಲ್ಲಿನ ಮೂರೂ ಸ್ಥಿರವಸ್ತುಗಳು ಆ ಹಿಂದು-ಮುಂದುವರೆಯುವಿಕೆಯಲ್ಲಿ ಭಾಗವಹಿಸಲು ನಿರಾಕರಿಸು ತ್ತಿರುತ್ತವೆ. ಅಂದರೆ ಇಲ್ಲಿ ಕಾಲದ ಚಲನೆಯು ವೃತ್ತಾಕಾರ ವಾಗಿರುತ್ತದೆ ಎಂದಂತಾಯ್ತು.

'ಸ್ಥಿರತೆ' ಹಾಗೂ 'ಚಲನೆ'ಗಳ ನಡುವಿನ ವ್ಯತ್ಯಾಸಗಳಲ್ಲಿನ ಸಾಮ್ಯತೆಯ ಕಗ್ಗವೇ ಈ ವಿಡಿಯೊದ ವಸ್ತು. ಸರಳವಾಗಿ ಹೇಳುವುದಾದರೆ: (1) ಕಲಾಕೃತಿಯೊಂದರಲ್ಲಿ ಒಂದು ನಿರ್ದಿಷ್ಟವಾದ ವಿಷಯವು ಇರುತ್ತದೆಂಬ ನಂಬಿಕೆ; ಮತ್ತು (2) ಅದನ್ನು ಸ್ವತಃ ಕಲಾವಿದನೇ/ಳೇ ಸೂಚಿಸಿರುತ್ತಾರೆಂಬ ನಿಶ್ಚಿತತೆಯು ಇಂದು ಕಲಾಇತಿಹಾಸದಲ್ಲಿ ಎಂದಿಗಿಂತಲೂ ಹೆಚ್ಚು ವಿವಾದಕ್ಕೆ ಒಳಗಾಗಿರುವ ವಿಷಯ. ಆ ನಿಟ್ಟಿನಿಂದ ಈ ವಿಡಿಯೊದ ವಿಷಯವು 'ಯುದ್ಧಪೀಡಿತ ದೇಶದಲ್ಲಿ ಬುದ್ಧನ ಮೌನ ಎಂದೂ ಆಗಬಹುದಾಗಿದೆ. ಆದರೆ ಕಲಾವಿದೆ ಸೂಚಿಸುವ ವಿಷಯವನ್ನು ಹಾಗೆಯೇ ಒಪ್ಪಿಕೊಂಡು ಬಿಡುವುದು, ಕೃತಿಯನ್ನು ಕುರಿತಾದ ಅದರ ಕರ್ತೃವಿನ ಒಡೆತನವನ್ನು ಹಾಗೆಯೇ ಸ್ವೀಕರಿಸಿಬಿಡುವ ಫ್ಯೂಡಲ್ ಮನೋಭಾವವನ್ನು ಸ್ವೀಕರಿಸಿಬಿಟ್ಟಂತಾಗುತ್ತದೆ. ಅಂದರೆ ಚಿತ್ರ ಶಿಲ್ಪಗಳಂತೆ ವಿಡಿಯೊ ಕಲೆಯು ಒಂದು ಮಾಧ್ಯಮವಾಗಿರದೆ 'ಅ-ಮಾಧ್ಯಮವಾಗುತ್ತದೆ' ಸುರೇಖರಿಗೆ.

ಕಲೆಯ ಮಾಧ್ಯಮವೆಂದರೆ ಅದರ ರೂಪುರೇಷೆಯು ಮೊದಲೇ ಎಲ್ಲರೂ ಒಪ್ಪಿರುವಂತಹುದಾಗಬೇಕಾಗುತ್ತದೆ. ಆದರೆ ಈ ಕಲಾವಿದೆ ವಿಡಿಯೊ ಕಲೆ ಸೃಷ್ಟಿಸಲು ತೊಡಗಿದಾಗಿನಿಂದ ಆರಂಭಿಸಿ ಈಗಿನವರೆಗೂ ಅದನ್ನು ಸಾಧಾರಣವಾಗಿ 'ಹೊಸ ಮಾಧ್ಯಮ'ವೆಂದು ಕರೆಯಲಾಗುತ್ತಿದೆಯೇ ಹೊರತು ಅದಕ್ಕೆ ಸ್ಪಷ್ಟ ರೂಪುರೇಷೆ ಎಂಬುದೇ ಇಲ್ಲ. ಮುಂದೊಮ್ಮೆ ವಿಡಿಯೊ ಕಲೆಯ ರೂಪುರೇಷೆಯು ಚಿತ್ರ, ಶಿಲ್ಪಗಳಂತೆ ನಿರ್ದಿಷ್ಟ ನೀತಿನಿಯಮಗಳನ್ನು ಹೊಂದುವ ಸಾಧ್ಯತೆಯೂ ಇಲ್ಲ. ಏಕೆಂದರೆ ಸ್ಪಷ್ಟ ರೂಪುರೇಷೆ ಇರುವುದು ಯುರೋಪು ಕೇಂದ್ರಿತ ಆಧುನಿಕ ಮಾಧ್ಯಮಗಳಿಗೆ ಮಾತ್ರ.

ಆಧುನಿಕೋತ್ತರ ಅಥವ ಛಾಯಾಚಿತ್ರ ಮಾಧ್ಯಮದ ಉಗಮದ ನಂತರ ಹುಟ್ಟಿಕೊಂಡ ಪರ್‌ಫಾರ್ಮೆನ್ಸ್, ವಿಡಿಯೊ ಅಂತಹವುಗಳಿಗೆ ನಿರ್ದಿಷ್ಟ, ಸ್ಪಷ್ಟ ಎನಿಸಬಹುದಾದಂತಹ ಹೊರರೇಖೆ ಸಾಧ್ಯವೇ ಇಲ್ಲ. ಆದ್ದರಿಂದಲೇ ಸುರೇಖ ಸುಮಾರು ಹತ್ತು ವರ್ಷದ ಹಿಂದೆ, 1999ರ ಸುಮಾರಿಗೆ ಸ್ಪಷ್ಟ, ರೂಢಿಗತ ಮಾಧ್ಯಮಗಳಿಗೆ ತೆರೆ ಎಳೆದು ಅಯೋಮಯ ಗುಣವನ್ನೇ ಸ್ಥಾವರವನ್ನಾಗಿಸಿ ಕೊಂಡಿರುವ ವಿಡಿಯೊ ಕಲೆಯ ಬಳಕೆಯನ್ನು ಪ್ರಾರಂಭಿಸಿದ್ದು. ಆದ್ದರಿಂದ ಈ ಕಲಾವಿದೆಗೆ ವಿಡಿಯೊ ಮಾಧ್ಯಮವು ಸ್ತ್ರೀತ್ವದ ನಿರ್ವಚನೆಗೆ ದಕ್ಕಿರುವ 'ಅ-ಮಾಧ್ಯಮ'.

ಒಂದರ್ಥದಲ್ಲಿ ಸುರೇಖ ಭಾರತೀಯ ವಿಡಿಯೊ ಕಲಾವಿದರಲ್ಲೇ ಅತಿ ಹೆಚ್ಚಿನ ಕೃತಿಗಳನ್ನು ರಚಿಸಿರುವವರಲ್ಲಿ ಒಬ್ಬರು. ವಿಡಿಯೊ ಮಾಡಲು ಅವರಿಗಿರುವ ಮುಖ್ಯ ಒತ್ತಡವು ಸ್ತ್ರೀತ್ವದ ಅಭಿವ್ಯಕ್ತಿ ಎಂದರೆ ಅದೊಂದು ಕ್ಲೀಷೆ ಎಂದೇನೂ ಭಾವಿಸಬೇಕಾಗಿಲ್ಲ. 'ಸ್ತ್ರೀವಾದ'ವೆಂಬ ಪದವನ್ನು ನಾನು ಇನ್ನೂ ಬಳಸದಿರುವುದು ಉದ್ದೇಶಪೂರ್ವಕ. ಸ್ತ್ರೀವಾದವು ದೃಶ್ಯಕಲೆಯ ಹೊರಗಿನ ಸಮಾಜೋ-ರಾಜಕೀಯ ರಂಗದಿಂದ ಉಗಮಗೊಂಡಿದ್ದ ರಿಂದಲೋ ಅಥವಾ ಅದರ ಸಾಂದ್ರತೆಯ ತೀವ್ರತೆಯು ದೃಶ್ಯರಂಗಕ್ಕೆ 'ಹೊರಗಾದ' ವಾಚ್ಯತೆ ಯನ್ನಾಧರಿಸಿದ್ದರಿಂದಲೋ ಏನೋ, ಸ್ತ್ರೀವಾದವೆಂದರೆ ಬೆಚ್ಚುವವರು, ನಿರಾಕರಿಸುವವರೇ ಚಿತ್ರಕಲೆಯನ್ನು ತುಂಬಿದ್ದಾರೆ. ಈಸಲ್ ಸಂಪ್ರದಾಯಕ್ಕೆ ಒಗ್ಗದ ಸ್ತ್ರೀತ್ವವನ್ನು (ಸ್ತ್ರೀವಾದಕ್ಕಿಂತ ಇದು ಸ್ವಲ್ಪ ಭಿನ್ನ) ಉದ್ದೇಶಿಸಿದ ಕೃತಿ ರಚಿಸಿದಲ್ಲಿ, ಪಿತೃಪ್ರಧಾನ ಗುಣ

ಅದಾಗಲೇ ಅಲ್ಲಿ ಒಳಸೇರಿಬಿಟ್ಟಿರುತ್ತದೆ. ಯಾವುದೇ ಶೈಲಿ, ಪ್ರಕಾರ ಅಥವ ಮಾಧ್ಯಮಗಳಾದ ತೈಲ-ಜಲವರ್ಣಗಳಲ್ಲಿ ಕೃತಿರಚಿಸಿದರೂ ಅದು ಪಿತೃಪ್ರಧಾನತೆಯನ್ನು ಸ್ವೀಕರಿಸಿದಂತೆಯೇ ಹೌದು. ಮಾಧ್ಯಮ-ಅಮಾಧ್ಯಮಗಲ ನಡುವಿನ ಭಿನ್ನತೆಗಳ ಬದಲಿಗೆ, ಸುರೇಖ, ನಗರೀಕರಣದ ಪರಿಧಿಯೊಳಗೆ ಹೆಂಗಸಿನ ವರ್ಗವು ಈ ಶತಮಾನದ ತಿರುವಿನಲ್ಲಿ ಹಾಯ್ದು ಹೋಗುತ್ತಿರುವ ಅನುಭವಗಳಿಗೆ ಚಾಲನೆ ನೀಡುತ್ತಾರೆ.

ಕೆಲವು ವಿಡಿಯೊಗಳಲ್ಲಿ ಸ್ವತ: ತಮ್ಮನ್ನೇ ಪಾತ್ರಧಾರಿಯನ್ನಾಗಿಸಿ ಕೊಳ್ಳುತ್ತಾರೆ ಈ ಕಲಾವಿದೆ. ಒಂದು ತೆರನಾದ ಅತ್ಮಚರಿತ್ರಾತ್ಮಕವಾದ ("ರೀಚಿಂಗ್ ಮೈಸೆಲ್ಫ್" ಅಥವ 'ನನ್ನನ್ನೇ ತಲುಪುವುದು', 2003, 4 ನಿಮಿಷದ ಲೂಪ್, ಟ್ರಿನಿಡಾಡ್‌ನ ಐ.ಸಿ.ಎಯಲ್ಲಿ ಸೃಷ್ಟಿಸಿದ್ದು; "ಮೇಕಿಂಗ್ ಹೋಮ್" ಅಥವ 'ಮನೆ ಮಾಡುವುದೆಂದರೆ', 2006, 2 ನಿಮಿಷದ ಲೂಪ್ ಮುಂತಾದ ವಿಡಿಯೊಗಳಲ್ಲಿ). ಮತ್ತೆ ಕೆಲವೆಡೆ ಐತಿಹಾಸಿಕವಾದ ಸ್ತ್ರೀತನಕ್ಕೆ ಸಮಕಾಲೀನ ಹೊರರೇಖೆಯನ್ನು ನೀಡುತ್ತಾರೆ ("ಭಾಗೀರಥಿ ನೀರು ತರುತ್ತಿರುವುದು" ಅಥವ 'ಭಾಗೀರಥಿ ಬ್ರಿಂಗಿಂಗ್ ವಾಟರ್' ವಿಡಿಯೊ). ಇನ್ನಿತರೆಡೆ ಈಗಾಗಲೇ ಸುದ್ದಿ ಮಾಧ್ಯಮಗಳು ಈ ವ್ಯಕ್ತಿಗಳನ್ನು ಹಾಗೂ ಅವರುಗಳ ವೃತ್ತಿಗಳನ್ನು ಸೆನ್ಸೇಷನಲ್‌ಗೊಳಿಸಿ ಬಿಟ್ಟಿದ್ದಾರೆ. ನಗರೀಕರಣವು ತನ್ನ ಸುಸೂತ್ರ ಕಾರ್ಯನಿರ್ವಹಣೆಗಾಗಿ, ಕಾರ್ಯನಿರ್ವಹಣೆಯ ಫಲವಾಗಿ ಹೊರಗಿರಿಸಿದವರ ತಂಟೆಗೆ ಸುದ್ದಿ ಮಾಧ್ಯಮಗಳು ಬರುವುದು ಸ್ವಾರಸ್ಯಕರವಾದ ವಿಕ್ಷಿಪ್ತವಾಗಿರುವ ಘಟನೆಗಳು ಅಂತಹವರ ಸುತ್ತ ಹುಟ್ಟಿಕೊಂಡಾಗ ಮಾತ್ರ. ಆಗ ಅಂತಹವರನ್ನು ಮಾಧ್ಯಮಗಳು 'ಏಕವಚನ' ದಲ್ಲೇ ಸಂಬೋಧಿಸುತ್ತವೆ. ಅಂದರೆ ಅಂತಹವರನ್ನು ಕುರಿತಾದ ಸುರೇಖರ ಸರಣಿ ವಿಡಿಯೊಗಳು ಮೊದಲಿಗೆ ಈಗಾಗಲೇ ಸೆನ್ಸೇಷನಲ್‌ಗೊಳಿಸಿರುವುದನ್ನು ಅಳಿಸಿ ಹಾಕುತ್ತವೆ. ನಂತರ, ನಾಟಕೀಯ ಸೀರಿಯಲ್ ಭಾಷೆ ತೊರೆದು ಹೊಸದೊಂದು ಕಾವ್ಯಾತ್ಮಕತೆಯಂತಹ ಅನುಭವ ಕಟ್ಟಿಕೊಡುತ್ತದೆಯೇ ಹೊರತು ಆಸಕ್ತಿಕರ ಕಥೆಯನ್ನಲ್ಲ. ಈಸಲ್ ಚಿತ್ರಗಳನ್ನು ಬಿಟ್ಟು ಬಿಡುವುದರ ಮೂಲಕ ಪಿತೃಪ್ರಧಾನ್ಯತೆಯನ್ನು ತೊಡೆವ ಪ್ರಯತ್ನ ದಂತಿದು. 'ದಾಖಲಾತಿ' ಮತ್ತು 'ಡಿಜಿಟಲ್' ಸುದ್ದಿ ಮಾಧ್ಯಮಗಳ ಕಾರ್ಯನಿರ್ವಹಣೆಯ ಕ್ರಮವನ್ನು ಅದರೊಳಗಿಂದ ಖಾಲಿಮಾಡಿ, ಆ ಮಾಧ್ಯಮವನ್ನು ಕ್ರಿಯಾತ್ಮಕ ಅಭಿವ್ಯಕ್ತಿಗೆ ಅಣಿಗೊಳಿಸುವುದು ಸುರೇಖರ ವಿಡಿಯೊ ಮಾಧ್ಯಮದ ಒಟ್ಟಾರೆ ಸತ್ವವೂ ಹೌದು.

* * *

(ಆ) ವಾಸ್ತವವಾಗಿ ಇದೊಂದು ಕೆಲವೇ ನಿಮಿಷಗಳ ವಿಡಿಯೊ. ಆದರೆ ಇದನ್ನು ನೋಡಬೇಕಾಗಿರುವುದು ಒಂದು ಲೂಪ್ ಆಗಿ. ಅಂದರೆ ಮುಗಿದ ಕೂಡಲೆ ಅದೇ ವಿಡಿಯೋ ಆರಂಭಗೊಳ್ಳುತ್ತದೆ, ನಿರಂತರವಾಗಿ, ದಿನವಿಡಿ, ಪ್ರದರ್ಶಿತ ಗ್ಯಾಲರಿಗಳಲ್ಲಿ. ಎಷ್ಟೇ ಸಲ ಬೇಕಾದರೂ ಇದನ್ನು ನೋಡಬಹುದು, ಎಲ್ಲಿಂದ ಬೇಕಾದರೂ ಇದನ್ನು ನೋಡಲು ಆರಂಭಿಸ ಬಹುದು. ಆದರೂ ಸ್ಥಿರವಾಗಿರುವ ಮೂರ್ತಿ, ಕಲಾವಿದೆ



ಮತ್ತು ವಾಹನಗಳು ಮಾತ್ರ ಚಲಿಸುವುದೇ ಇಲ್ಲ. ಯಾವುದೇ ವಿಡಿಯೊ ಕಲೆಯನ್ನೂ ಸಾಮಾನ್ಯವಾಗಿ ಲೂಪ್ ಸಂರಚನೆ ಯಲ್ಲಿಯೇ ನೋಡಲಾಗುತ್ತದಾದರೂ ಸಹ ಈ ನಿರ್ದಿಷ್ಟ ಕೃತಿಯಲ್ಲಿ, ಹೆಚ್ಚು ಹೆಚ್ಚು ಸಲ ನೋಡಿದಷ್ಟೂ ಸ್ಥಿರ ವಾಹನ, ಬೆಟ್ಟ-ಶಿಲ್ಪ ಹಾಗೂ ಸ್ವತ: ಕಲಾವಿದೆಯ ಸ್ಥಾವರ ಗುಣವು ಎದ್ದು ಕಾಣುತ್ತದೆ. ಅಕಸ್ಮಾತ್ ಸ್ಥಿರವಾಗಿರುವ ಕಲಾವಿದೆ ಚಲಿಸುವು ದಾದಲ್ಲಿ ಆಕೆ ಹಿಮ್ಮುಖವಾಗಿ ಹಾಗೆ ಮಾಡುತ್ತಾರೆಯೋ ಅಥವ ಮುಮ್ಮುಖವಾಗಿಯೋ ಎಂಬ ವೀಕ್ಷಕನಲ್ಲಿನ ಕುತೂಹಲವೂ ಸಹ ಅದು ಹೇಗೋ ಸ್ಥಿರತೆಯನ್ನು ಮತ್ತಷ್ಟು ಅಸ್ಥಿರಗೊಳಿಸುತ್ತದೆ. ವಾಕ್ಯ ವೊಂದರಲ್ಲಿ ಮುಖ್ಯ ಪದ-ವಾಕ್ಯಗಳ ಕೆಳಗೆ ಗೀಟು ಎಳೆದಂತೆ ಇದು.

ನಾಮ್ ಜುನ್ ಪೈಕ್ ಎಂಬ ಜರ್ಮನ್ ನೆಲೆ-ಸ್ಥಿತ್ಯಂತರ ಗೊಂಡ (ಅಂತಹವರನ್ನು 'ಡಯಸ್ಪೊರಿಕ್' ಎನ್ನುತ್ತೇವೆ) ವಿಡಿಯೊ ಕಲಾವಿದನ ಪ್ರಸಿದ್ಧ ವಿಡಿಯೊವೊಂದನ್ನು ನೆನಪಿಸುವ ಪ್ರಸ್ತುತ ವಿಡಿಯೊದಲ್ಲಿ ಕಲಾವಿದೆ ಬುದ್ಧನನ್ನು ಅನುಕರಿಸುತ್ತ, ಅನುಸರಿಸುವಂತಿದೆ. ಪೈಕನ ವಿಡಿಯೊದಲ್ಲಿ ಬುದ್ಧನ ಮೂರ್ತಿ ಯನ್ನು ಟಿವಿಯ ಎದುರಿಗಿರಿಸಲಾಗಿದ್ದು, ಆನ್ ಆಗಿರದ ಟಿವಿಯಲ್ಲಿ ಬುದ್ಧನ ಪ್ರತಿಬಿಂಬ ನಿರಂತರವಾಗಿರುತ್ತದೆ. ಮತ್ತೊಂದು ಆತನದೇ ವಿಡಿಯೊ ಕೃತಿಯಲ್ಲಿ ಟಿವಿಯೊಂದು ಆನ್ ಆಗಿದ್ದು, ಅದರೊಳಗೆ ಸ್ಥಿರ ಬುದ್ಧನನ್ನು ಹೊರತುಪಡಿಸಿ ಮತ್ತೇನೂ ಇರುವುದಿಲ್ಲ. ಎಷ್ಟೇ ಸುದೀರ್ಘವಾಗಿ ನೋಡಿದರೂ ಸಹ ಬದಲಾವಣೆಯೇನೂ ಆಗುವುದಿಲ್ಲ. ಟಿವಿ ಮೂಲತಃ ಚಲಿಸುವ ದೃಶ್ಯದ ವಕ್ತಾರ. ಅದರೊಳಗೆ ನಿಶ್ಚಿಂತೆಯ ಸಂಕೇತವಾದ ಬುದ್ಧನ ಸ್ಥಿರ ಇರುವಿಕೆಯನ್ನು ಹತ್ತು ಹಲವಾರು ರೀತಿ ಓದಬಹುದು. ಮತ್ತು ಇದು ವಿಡಿಯೊ ಕಲೆಗೇ ನಿರ್ದಿಷ್ಟ ವಾದ, ಚಿತ್ರಕಲೆಯಲ್ಲಿ ಸೂಚಿಸಲಾಗದ ಸ್ಥಿರತೆ ಎಂಬುದನ್ನು ಗಮನಿಸಬೇಕು.

ವ್ಯತ್ಯಾಸವೆಂದರೆ, ಏಷ್ಯದ ಬೌದ್ಧಧರ್ಮೀಯ ದೇಶ ವೊಂದರ ನಿರಂತರ ಯುದ್ಧಮನೋಭಾವಕ್ಕೆ ಇರುವ ಮೂಲ ಕಾರಣಗಳಲ್ಲಿ 'ಅನ್ಯ'ತೆಯೂ ಒಂದಂಶ. ಅಧಿಕಾರಸ್ತರ ವಾದದಲ್ಲಿ ತಮಿಳರು 'ಅನ್ಯ'ರಿರಬಹುದಾದರೂ ಸುರೇಖರ ವಿಡಿಯೊ ಅದಕ್ಕೆ ಬೇರೊಂದು ಆಯಾಮ ನೀಡುವಂತಿದೆ. ಇಡೀ ಮನುಕುಲದ ಜ್ಞಾನ ಸಂಗ್ರಹಣದ 'ಅನ್ಯ' ಅಥವ ಇನ್ನರ್ಧ ಭಾಗವಾದ ಸ್ತ್ರೀತ್ವದ ಕೋನದಿಂದ ಬೌದ್ಧ ಧರ್ಮಕ್ಕೂ ಹಿಂಸೆಗೂ 20ನೇ ಶತಮಾನದಲ್ಲಿ ಏಷ್ಯಾದಲ್ಲಿರುವ ಐತಿಹಾಸಿಕ ಸಂಬಂಧ ವನ್ನೂ ಉದ್ದೇಶಿಸುತ್ತದೆ ಈ ವಿಡಿಯೊ.

(ಇ) ಈ 'ರೂಪನಿಷ್ಠ' ಹಾಗೂ 'ತಾತ್ವಿಕ' ಓದುವಿಕೆಗಳಿಗೇ ಈ ವಿಡಿಯೊ ಸೀಮಿತಗೊಳ್ಳದು. ಏಕೆಂದರೆ ಈ ಕೃತಿಯು ವಿಡಿಯೊ ಆಗಿರದೆ ವಿಡಿಯೊ-ಇನ್‌ಸ್ಟಲೇಷನ್ನಿನ ಭಾಗವಾಗಿ ಮೂಡಿಬಂದಿರು ವಂತಹುದಾಗಿದೆ. ವಿಡಿಯೊ ಪ್ರದರ್ಶನವು ಒಂದು ಪುಸ್ತಕವಾದರೆ ವಿಡಿಯೊ - ಇನ್‌ಸ್ಟಲೇಷನ್



ಅಧ್ಯಾಯವಿದ್ದಂತೆ. ಗ್ರಂಥಾಲಯದಲ್ಲಿ ಪುಸ್ತಕವು, ಒಂಟಿಯಾಗಿಯೂ ಇರಬಲ್ಲದು. ಆದರೆ ಅಧ್ಯಾಯಕ್ಕೆ ಇತರೆ ಅಧ್ಯಾಯಗಳ ಸಾತತ್ಯತೆ ಅನಿವಾರ್ಯ. ವಿಡಿಯೊ-ಇನ್ಸ್‌ಟಲೇಷನ್ ಆಗಿರುವುದರಿಂದ ಈ ಕೃತಿಗೆ ಇತರೆ ಕೃತಿಗಳೊಂದಿಗೆ 'ವಿಷಯ'ದ ದೃಷ್ಟಿಯಿಂದ ಒಡನಾಡುವುದು ಅನಿವಾರ್ಯ. ಆಗ, ಇಲ್ಲಿಯವರೆಗೂ ನಾವು ಈ ವಿಡಿಯೊ ಬಗ್ಗೆ ಓದಿರುವ ರೂಪನಿಷ್ಠ ಓದು ವಿಶಾಲ ಪ್ರದರ್ಶನವೊಂದರ ಮರಿ-ಅಧ್ಯಾಯವಾಗಿಹೋಗುತ್ತದೆ.

*   *   *

**(ಈ)** ಕೃತಿ, ಕರ್ತೃ, ಚೌಕಟ್ಟು – ಈ ಮೂರು ಅಂಶಗಳನ್ನು ಸುರೇಖರ ವಿಡಿಯೊ-ಇನ್ಸ್‌ಟಲೇಷನ್‌ಗಳು ನಿರಾಕರಿಸುತ್ತವೆ. "ಭಾಗೀರಥಿ" (2004, ವಿಡಿಯೊ ಲೂಪ್, 5 ನಿಮಿಷ) ವಿಡಿಯೊದಲ್ಲಿ ಬಾಥ್‌ಟಬ್ಬಿನಲ್ಲಿ ಮುಳುಗೇಳುವ ಆಧುನಿಕ ಭಾಗೀರಥಿಯ ಪಾತ್ರಧಾರಿಗಳು ಇಬ್ಬರು: ಸುರೇಖ ಮತ್ತು ಮತ್ತೊಬ್ಬ ಕಲಾವಿದೆ ಅರ್ಚನಾ ಹಂದೆ. ಮತ್ತು ಅದನ್ನು ಚಿತ್ರೀಕರಿಸಿರುವವರೂ ಸಹ ಇದೇ ಇಬ್ಬರು ಕಲಾವಿದೆಯರು. ಆದ್ದರಿಂದ ಏಕಕೃತಿ, ಏಕಕರ್ತೃವಿನ ಕಲ್ಪನೆ ಇಲ್ಲಿ ಉದ್ದೇಶಪೂರ್ವಕವಾಗಿ ನಿರಾಕೃತಗೊಳ್ಳುತ್ತವೆ. ಕೆರೆಗೆ ಹಾರ ಒಬ್ಬ ಭಾಗೀರಥಿಯ ಕಥೆಯಲ್ಲ. ಊರು ಉಳಿಸಲಿಕ್ಕಾಗಿ ಕೆರೆಗೆ ಹಾರ ನೀಡುವ ಸಂಪ್ರದಾಯವನ್ನು ಸೂಕ್ಷ್ಮವಾದ ಮನೆಯೊಳಗಿನ ಲಿಂಗ-ನಿರ್ದಿಷ್ಟ ಹಿಂಸೆಯ ಮುನ್ಸೂಚನೆಯಾಗಿ ನೋಡುವ ಪ್ರಯತ್ನವು ಹಳೆಯ ಚೌಕಟ್ಟನ್ನು ಮುರಿಯುವುದಲ್ಲದೆ, ಚೌಕಟ್ಟುಗಳ ಅವಶ್ಯಕತೆಗಳನ್ನೇ ಪ್ರಶ್ನೆಗೊಡ್ಡುವ ಪ್ರಯತ್ನವಾಗಿದೆ.

ಇದಕ್ಕೆ ಸುರೇಖ ಕಲಾವಿದೆಯಾಗಿ ರೂಪುಗೊಂಡ ಕಾಲಮಾನವೂ ಪೂರಕವಾಗಿದೆ. 1990ರ ದಶಕದ ನಂತರ ಭಾರತವು ತೆರೆದ ಮಾರುಕಟ್ಟೆಯಾಗಿ ಮಾರ್ಪಾಡುಗೊಳ್ಳುವ ಪ್ರಯತ್ನದಲ್ಲಿ ದೃಶ್ಯಕಲಾ ರಂಗಕ್ಕೆ ಒದಗಿಬಂದ ಒಂದು ಮುಖ್ಯ ಪ್ರಯೋಜನವೆಂದರೆ ಸ್ತ್ರೀವಾದವೆಂಬ ಸಮಾಜೋ-ರಾಜಕೀಯ ವಿಷಯವನ್ನು ದೃಶ್ಯ ಸಂಸ್ಕೃತಿಯ 'ಒಳಗಿನಿಂದಲೇ' ಸಮಸ್ಯಾತ್ಮಕಗೊಳಿಸುವ ಅವಕಾಶ ಒದಗಿಬಂದದ್ದು. ಈ ಮುಂಚೆಯೇ ಹೇಳಿದಂತೆ, ಚಿತ್ರಶಿಲ್ಪ ಭಿತ್ತಿ ಮುಂತಾದ ರೂಢಿಬದ್ಧವಾದ ಮಾಧ್ಯಮಗಳ ಮೂಲಕ ಕೃತಿ ರಚಿಸು ತ್ತಿದ್ದವರು, ರಚಿಸುತ್ತಿರುವವರು "ಒಂದು ಕೃತಿ ಹಾಗೂ ಒಬ್ಬ ಕರ್ತೃ" ಎಂಬ ನಂಬಿಕೆಯಲ್ಲಿ ಬಂದಿಗಳಾಗಿರುತ್ತಾರೆ. ಚೆನ್ನೈನ ದಕ್ಷಿಣಚಿತ್ರ ಹಾಗೂ ಸ್ವೀಡನ್ನಿನ ಮಾಲ್ಮೋ ಸಂಗ್ರಹಾಲಯಗಳ ಸಹಯೋಜನೆ ಯಲ್ಲಿ ಸುರೇಖ ಸೃಷ್ಟಿಸಿದ ವಿಡಿಯೊದಲ್ಲಿ ಅನೇಕ ಕೌದಿ ನೇಯುವ ಕುಶಲಕರ್ಮಿ ಕಲಾವಿದೆಯರಿದ್ದರು ("ಥ್ರೆಡಿಂಗ್ ದ ಥ್ರೆಡ್ಸ್" ಅಥವಾ 'ದಾರವನ್ನೂ ನೆಯ್ಗೆಗಳವಡಿಸುವುದು'). ಅವರೆಲ್ಲರೂ ಈ ವಿಡಿಯೊದಲ್ಲಿ ನಿಜವಾದ ಒಂದು ಬೃಹತ್ ಕೌದಿಯನ್ನು ಸುತ್ತಲೂ ಕುಳಿತು ನೇಯುತ್ತಾ, ತಮ್ಮ ಜೀವನದ ಕೆಲವು ಪಿಕ್ಷಿಪ್ತ ಘಟನೆಗಳನ್ನು ವಿವರಿಸುತ್ತ ದಾರದೊಂದಿಗೆ ಸೂಜಿಯನ್ನೂ ಹಾಗೆಯೇ ಉಳಿಸಿ ಬಿಡುತ್ತಾರೆ, ಕಥೆ ಎಂದಿಗೂ ಅಪೂರ್ಣವೆನ್ನುವಂತೆ. ಇಂಥದ್ದೇ ಮತ್ತೊಂದು ವಿಡಿಯೊದಲ್ಲಿ ಸಮಕಾಲೀನ ಕಲಾವಿದೆ ಮಿತ್ರರು ತಮ್ಮ ಬದುಕಿನ ಒಂದು ಒಳಗುಟ್ಟನ್ನು, ದಾರದಿಂದ ಹೊಲಿಗೆಹಾಕುತ್ತ, ವಿಡಿಯೊ ಹಿಡಿದ ಸುರೇಖರಿಗೆ ಸಮ್ಮುಖದಲ್ಲಿ ಎಳೆಬಿಚ್ಚುತ್ತ ಹೋಗುತ್ತಾರೆ. ಇದೊಂದು ಸಹಭಾಗಿತ್ವವಿರುವ (ಶೇರ್ಡ್ ಆಥರ್‌ಶಿಪ್) ಸೃಷ್ಟಿ. 'ಭಾಗೀರಥಿ' ವಿಡಿಯೊದಲ್ಲಿ ಇಬ್ಬರು ಪಾತ್ರಧಾರಿಗಳಿದ್ದಂತೆ, ಇಬ್ಬರು ಕ್ಯಾಮರ ನಿರೂಪಣೆ ಕೈಗೊಂಡಂತೆ. ಸೃಷ್ಟಿಕ್ರಿಯೆಯ ಅಧಿಕಾರದ ಪ್ರಜಾಪ್ರಭುತ್ವವಾದಿತ್ವವೆಂದರೆ ಇದೇ. ಮುಕ್ತ ಮಾರುಕಟ್ಟೆಯ ಅವಕಾಶವನ್ನು ಸುರೇಖ ಕರ್ತೃತ್ವದ ನಿರ್ವಚನೆಗೆ ಬಳಸುವುದು ಹೀಗೆ.

*   *   *

**(ಉ)** ಸುರೇಖ ವಿಡಿಯೊ ಮತ್ತು ವಿಡಿಯೊ ಇನ್ಸ್‌ಟಲೇಷನ್‌ಗಳನ್ನು ಸೃಷ್ಟಿಸುವ ಮೊದಲಿಗೆ ಛಾಯಾಚಿತ್ರಕೃತಿಗಳು ಮತ್ತು ಅದಕ್ಕೂ ಮುನ್ನ ಚಿತ್ರಕಲೆಯನ್ನು ಸೃಷ್ಟಿಸುತ್ತಿದ್ದ ಬೆಂಗಳೂರಿನ ಕಲಾವಿದೆ. ತಾಂತ್ರಿಕ ಮಾಧ್ಯಮಗಳಾದ ಛಾಯಾಚಿತ್ರ, ವಿಡಿಯೊಗಳನ್ನು ಸಾಧಾರಣವಾಗಿ ಹೊಸ ಮಾಧ್ಯಮ (ನ್ಯೂ ಮೀಡಿಯ) ಎನ್ನುತ್ತಾರೆ. ಚಿತ್ರಕಲೆಯನ್ನು ತೊರೆದು (ಅಂದರೆ ಅದಕ್ಕೆ ಎಂದಿಗೂ ಹಿಂದಿರುಗಲಾರರು ಎಂದರ್ಥವಲ್ಲ, ಆದರೆ ಕಳೆದ ಒಂದೂವರೆ ದಶಕದಿಂದ ಆ ಮಾಧ್ಯಮದಲ್ಲಿ ಕೃತಿಗಳನ್ನು ಸೃಷ್ಟಿಸಿಲ್ಲ, ಅಷ್ಟೇ) ಹೊಸ ಮಾಧ್ಯಮದಲ್ಲಿ ತೊಡಗಿಸಿಕೊಂಡಿರುವುದಕ್ಕೆ ಕಾರಣ ತೈಲವರ್ಣ ಸಂಪ್ರದಾಯ ಅಥವ ಈಸಲ್ ಸಂಪ್ರದಾಯಕ್ಕಿರುವ ಐತಿಹಾಸಿಕ ಪಿತೃಪ್ರಾಧಾನ್ಯತೆ.

1990ರ ದಶಕದಲ್ಲಿ ಕೃತಿ ರಚನೆಗೆ ತೊಡಗಿದ ಈ ಕಲಾವಿದೆ, ಹತ್ತು ವರ್ಷದ ನಂತರ, ಹತ್ತು ವರ್ಷಗಳಿಂದ ಫೋಟೋಗ್ರಫಿ-ವಿಡಿಯೋಗಳ ಸೃಜನಾತ್ಮಕ ಅಳವಡಿಸುವಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಅದಕ್ಕೆ ಮೂಲ ಪ್ರೇರಣೆ ದಕ್ಷಿಣ ಏಷ್ಯಕ್ಕೇ ನಿರ್ದಿಷ್ಟವಾದ ಸ್ತ್ರೀತನಕ್ಕೆ 'ತನ್ನತನ' ಅಥವ 'ಐಡೆಂಟಿಟಿ' ಎಂದರೇನೆಂಬ ತುರ್ತಿನ ಪ್ರಶ್ನೆ. ಇಪ್ಪತ್ತನೇ ಶತಮಾನದ ಭಾರತೀಯ ಮಹಿಳಾ ಕಲಾವಿದರ ಆದಿಯಲ್ಲಿ ಅಮೃತಾ ಶೇರ್‌ಗಿಲ್ ಹೆಣ್ಣಾಗಿ ತನ್ನತನದ ಬಗ್ಗೆ ವಿಪರೀತ ಎಚ್ಚರವಾಗಿದ್ದದ್ದಕ್ಕೆ ಕಾರಣ ಆಕೆಯ ಯುರೋಪಿಯನ್ ಬಾಲ್ಯಾನುಭವವೇ. ನಂತರ ಸುಮಾರು ಅರ್ಧ ಶತಮಾನ ಕಾಲ ಮಹಿಳಾ ಕಲಾವಿದೆಯರಿದ್ದರೂ 1980ರ ನಂತರದಿಂದಷ್ಟೇ ಮಹಿಳಾನುಭವದ ಒಳಹೊರಗಿನ ಅನುಭವಗಳನ್ನು ಕೃತಿಗಳಲ್ಲಿ ಬಹುಪಾಲು ಕಲಾವಿದೆಯರು ರಾಜಕೀಯ ಗೊಳಿಸುತ್ತಿರುವುದು. ಲಿಂಗ, ವರ್ಗ ಮತ್ತು ಜಾತಿ ಸಂವಾದವನ್ನು ಅನಿವಾರ್ಯ ಎಂದು ಒಪ್ಪಿಕೊಂಡಿರುವ ಬೌದ್ಧಿಕ ವರ್ಗದ ದೃಶ್ಯಕಲಾವಿದರಲ್ಲಿ ಸುರೇಖ ಒಬ್ಬರು.

ಕಲಾವಿದೆ ಸುರೇಖರ ವಿಡಿಯೊ-ಕೃತಿಗಳು ಕಣ್ಣಿನ ಹಾಗೂ ದೃಷ್ಟಿಯ ಲಿಂಗನಿರ್ದಿಷ್ಟತೆಯನ್ನು ಕೆದಕುವ ಪ್ರಯತ್ನ ಮಾಡುತ್ತವೆ. ಅದರ ಮೂಲಕ, (1) ಮೊದಲಿಗೆ ದೃಷ್ಟಿಯ, ದೃಷ್ಟಿಸುವ, ದೃಶ್ಯೀಕರಣದ ರಾಜಕಾರಣವು ಲಿಂಗಾತೀತವಲ್ಲ ಎಂಬ ಬೂರ್ಜ್ವಾ (ಭಾರತೀಯ

ನಗರಕೇಂದ್ರಿತ ಏಪೊಲೆಟಿಕಲ್) ಮನೋಭಾವವನ್ನು ಕೆದಕುತ್ತವೆ. (2) ಎರಡನೆಯದಾಗಿ ಈ ನೋಟದ ಲಿಂಗರಾಜ ಕಾರಣದಲ್ಲೂ ಹೆಜಿಮೊನಿಕ್ ಶ್ರೇಣೀಕರಣವಿರುವುದನ್ನೂ ತೋರಿಸಿಕೊಡುವುದರ ಮುಖೇನ ಕಣ್ಣ ಲಿಂಗೀಯತೆಯ ಔಚಿತ್ಯದೆಡೆಯೂ ದೃಶ್ಯವ್ಯಾಖ್ಯೆಯನ್ನೆಳೆಸುತ್ತವೆ (ಲಿಂಡಾ ನಾಕ್ಲಿನಳ ಪ್ರಭಾವವಿದು).

ಸ್ತ್ರೀತನವನ್ನು ಕ್ರಿಯಾತ್ಮಕ ಸಂವಹನಾ ಭಾಷೆಯೊಂದರ ಮುಖೇನ ನಿರ್ವಚಿಸುವುದು ಮತ್ತು (ಆ) ದೃಶ್ಯ ಸಂಸ್ಕೃತಿಯೊಳಗಣ ಸ್ತ್ರೀವಾದತ್ವದ ಸಾಧ್ಯತೆಯ ಪರಿಶೀಲನೆ ಇದರಿಂದಾಗಿ ಸಾಧ್ಯವಾಗುತ್ತದೆ.

(ಊ) ಇದು ಇಲ್ಲಿಯವರೆಗಿನ, ಅಂದರೆ ಒಂಬತ್ತು ವರ್ಷಗಳಲ್ಲಿ ಸುರೇಖ ಸೃಷ್ಟಿಸಿದ ವಿಡಿಯೊ ಹಾಗೂ ವಿಡಿಯೋ ಇನ್‌ಸ್ಟಲೇಷನ್‌ಗಳ ಸಾರ. ಪ್ರಸ್ತುತದಲ್ಲಿ, 2010ರ ಜನವರಿ ತಿಂಗಳಲ್ಲಿ ಏ.ಡಿ.ಎ ರಂಗಮಂದಿರದ ಮೇಲಿರುವ 'ಸಮೂಹ'ವೆಂಬ ತಾತ್ಕಾಲಿಕ ಪರ್ಯಾಯ ಪ್ರದರ್ಶನಾಲಯದಲ್ಲಿ "ಅನ್‌ಕ್ಲೈಮ್ಡ್ ಅರ್ಬನ್ ಫಿಕ್ಷನ್ಸ್/ಫ್ರಿಕ್ಷನ್ಸ್" ('ಅನಾಥಭಾವ : ನಗರೀಕೃತ ಕಥನ ಮತ್ತು ಘರ್ಷಣೆ') ಎಂಬ ಶೀರ್ಷಿಕೆಯ ಪ್ರದರ್ಶನವು ಹತ್ತಾರು ವಿಡಿಯೊ–ಇನ್‌ಸ್ಟಲೇಷನ್‌ಗಳನ್ನು ಒಳಗೊಂಡಿತ್ತು. ಅವರ ಮುಂಚಿನ ಪ್ರದರ್ಶನವು ನಗರಕೇಂದ್ರಿತ ಮಹಿಳೆಯರ ಸಾವಿನ ರೂಪ/ಕಗಳನ್ನು ಉದ್ದೇಶಿಸಿದ್ದಾಗಿತ್ತು. ಪ್ರಸ್ತುತ ಪ್ರದರ್ಶನದಲ್ಲಿ, ಮುಂಚಿನ ಸರಣಿಯ ಮುಂದುವರಿದ ರೂಪವೋ ಎಂಬಂತಹ ವಿಡಿಯೊಗಳಿದ್ದವು. ಬೆಂಗಳೂರು ನಗರಕ್ಕೇ ನಿರ್ದಿಷ್ಟವಾದ ಕೃತಿಗಳಿವು.

ದಶಕಗಳಿಂದಲೂ ಅನಾಥ ಶವಗಳ ಸಂಸ್ಕಾರ ಮಾಡುತ್ತಿರುವ ತ್ರಿವಿಕ್ರಮ ಮಹಾದೇವ, ಕಬ್ಬನ್ ಪಾರ್ಕಿನಲ್ಲಿ ಮೂರು ದಶಕ ಗಳಿಂದಲೂ ಭಿಕ್ಷೆ ಬೇಡುತ್ತಿರುವ, ('ಎಂಪ್ಟೀ ಬೆಂಚ್') ಅಸ್ಖಲಿತ ಇಂಗ್ಲಿಷ ಮಾತನಾಡುವ ಮೇರಿ, ವಯಸ್ಕರ ನಗುಯೋಗದ (ಲಾಫ್ಟರ್ ಕ್ಲಬ್) ಸ್ಥಾಪಕ ಸತ್ಯನಾರಾಯಣರ ತಾತ್ವಿಕ ವಿವರಣೆ, ಸಯ್ಯದ್ ಅಹ್ಮದ್ ಅವರು ರದ್ದಿಗೆ ಹಾಕಲಾದ ಕಂಪ್ಯೂಟರ್ ಭಾಗಗಳನ್ನು ಪುನರ್‌ಬಳಕೆ ಮಾಡುವ ರೀತಿ – ಇವೇ ಮುಂತಾದ ವ್ಯಕ್ತಿ–ವೃತ್ತಿಗಳ ಕುರಿತ ವಿಡಿಯೊಗಳಿವು.

ಇಲ್ಲಿಯವರೆಗಿನ ಸುರೇಖರ ವಿಡಿಯೊದಲ್ಲಿ ಸ್ತ್ರೀತನವನ್ನು ಕುರಿತ ಕಥನದ ಒಳಗೆ ನೇರವಾಗಿ ಸ್ತ್ರೀ ದೇಹವು ಸಮಕಾಲೀನ ನಗರೀಕರಣ ದಲ್ಲಿ ಹೊಂದಿದ ರೂಪಾಂತರ ಕುರಿತ ದುಃಖಿತ ಸ್ಮರಣೆಯಾದರೆ (ಮೆಲಾಂಕಲಿಕ್) ಈ ಪ್ರದರ್ಶನದಲ್ಲಿ ಸ್ತ್ರೀತನವು ಕೃತಿಯ ಚೌಕಟ್ಟಿನ ಪರದೆಯ ಹಿಂದಿನಿಂದ ಕಾರ್ಯನಿರ್ವಹಿಸುತ್ತದೆ. ಸಮಾಜದಲ್ಲಿ ನಿರ್ದಿಷ್ಟ ಕಾರ್ಯನಿರ್ವಹಣೆಯ ಅವಕಾಶವಿಲ್ಲದ ದೀನರೊಂದಿಗೆ ಹೆಣ್ತನವು ಐತಿಹಾಸಿಕವಾಗಿ ಅನುಭವಿಸಿರಬಹುದಾದ ಕೀಳರಿಮೆಯನ್ನು ತಾಳೆಹಾಕುತ್ತಾರೆ ಈ ಕಲಾವಿದೆ.

ಈ ನಿರ್ದಿಷ್ಟ ನಗರವು ಬೆಳೆವ ಅವಸರದಲ್ಲಿ ಅನೇಕ ವ್ಯಕ್ತಿಗಳಿಗೆ ಯಾವುದೇ ಜೀವನೋಪಾಯ ಒದಗಿಸದಂತೆ ಮಾಡಿಬಿಟ್ಟಿತ್ತು ಈ ಕ್ರಿಯೆ. ಅಂತಹವರು ತಮ್ಮ ವೈಯಕ್ತಿಕ ಪ್ರತಿಭೆಯಿಂದಾಗಿ, ನೆಲೆಯಿಲ್ಲವೆಂಬ ಗಾಭರಿಯಲ್ಲಿ, ತಮ್ಮದೇ ವೈಯಕ್ತಿಕ ಪ್ರತಿಭೆಯೊಂದನ್ನು ರೂಪಿಸಿಕೊಂಡ ಫಲದ ಚಿತ್ರಣ ಈ ವಿಡಿಯೊಗಳು. ನಗರೀಕರಣವು ತೊರೆದ, ತೊಡೆದು ಹಾಕಿದ ವ್ಯಕ್ತಿಗಳ ವ್ಯತಿರಿಕ್ತ ಉಪಾಯಗಳೊಂದಿಗೆ ನಗರೀಕೃತ ಮಹಿಳೆಯ ಹೊಸ ದೈಹಿಕ, ಮಾನಸಿಕ ಪುನರ್‌ರಚನೆಯ ಭಾಷೆಯ ತಾಳೆಹಾಕಿಕೊಳ್ಳುವ 'ಕ್ರಿಯೆ' ಈ ಪ್ರದರ್ಶನದ ಮುಖ್ಯ ಸಾಧನೆ.



ನಗರವಿಹೀನರ ವೈಯಕ್ತಿಕ ಬಾಳ್ವೆಯ ಉಪಾಯಗಳಿಗೆ ಉದಾಹರಣೆಗೆ ಕಂಪ್ಯೂಟರ್ ರದ್ದಿಯನ್ನು ಪುನರ್ ಬಳಕೆ ಮಾಡುವಾಗ 'ಆಶ್ ರೀಸೈಕ್ಲರ್ಸ್'ನ ಒಡೆಯ ರೀಸೈಕಲ್ ಮಾಡುವುದನ್ನು ಕಲಿತದ್ದು ಮುಸ್ಲಿಂ ಜನಾಂಗವು ಶಿವಾಜಿ ನಗರದಲ್ಲಿ ಕುರಿ ಕಡಿವ ಕ್ರಿಯೆಯ ಪ್ರಭಾವದ ಮೂಲಕ. "ಯಾವುದೇ ಅಂಗವೂ ವ್ಯರ್ಥವಾಗದಂತೆ ಪುನರ್ ಬಳಸುವ ಮೂಲಕ ಪರಿಸರ ಮಾಲಿನ್ಯವನ್ನು ಕಡಿಮೆ ಗೊಳಿಸಿದಂತಾ ಗುತ್ತದೆ" ಎಂಬ ತತ್ವವೂ ಸುರೇಖರ "ಅನಾಮಿಕ.." ಪ್ರದರ್ಶನದ ಒಟ್ಟಾರೆ ಸಾರವೂ ಹೌದು. ಈ ಪ್ರದರ್ಶನದಲ್ಲಿ ನಿರಾಕೃತವಾದ ನೂರಾರು ಕೀಬೋರ್ಡ್‌ಗಳ ಮೂಲಕ ಬೃಹತ್ ಗೋಡೆಯನ್ನು ಪ್ರದರ್ಶನದ ಗೋಡೆಯಲ್ಲಿ ನಿರ್ಮಿಸಲಾಗಿದ್ದು, ಅದರ ಮೇಲೆ ಚೆಲ್ಲಲಾದ ಬೆಳಕಿನ ಮೂಲಕವೇ ವಿಡಿಯೋಗಳನ್ನು ನೋಡಬೇಕಿತ್ತು. ಗ್ಯಾಲರಿ ಸಂಸ್ಕೃತಿಯಲ್ಲಿ – ಇದನ್ನು 'ವೈಟ್ ಕ್ಯೂಬ್ ಕಾನ್ಸೆಪ್ಟ್' ಎನ್ನುತ್ತಾರೆ – ಕತ್ತಲಿನಲ್ಲಿ ಮಾತ್ರ ವಿಡಿಯೊ ನೋಡಬೇಕೆಂಬ ಮುಂತಾದ ನಿಯಮಗಳನ್ನು ಇಲ್ಲಿ ವ್ಯತಿರಿಕ್ತಗೊಳಿಸಲಾಗಿದೆ. ನಗರಕೇಂದ್ರಿತ ಮೇಲ್ವರ್ಗದ ನಡವಳಿಕೆಯನ್ನು ತನ್ಮೂಲಕ ಈ ಪ್ರದರ್ಶನವು ಊನಗೊಳಿಸುತ್ತದೆ ಸಹ.

ಕಬ್ಬನ್‌ಪಾರ್ಕಿನಲ್ಲಿದ್ದ ಭಿಕ್ಷುಕಿ ಮೇರಿ ಮೇಡಂ ತನ್ನ ಜೀವನ ಗಾಥೆಯನ್ನು ವಾಚ್ಯಗೊಳಿಸುವಾಗ ಆಕೆಯ ಮುಖವನ್ನು ವಿಡಿಯೊದಲ್ಲಿ ಎಲ್ಲಿಯೂ ತೋರಿಸಲಾಗುವುದಿಲ್ಲ. ನಿಯಮದ ಪ್ರಕಾರ ಸಂಜೆಯ ನಂತರ ಯಾರೂ ಪಾರ್ಕಿನಲ್ಲಿ ಇರುವಂತಿಲ್ಲವಾದರೂ, ಈಕೆಯ ವೈಯಕ್ತಿಕ ಪ್ರತಿಭೆಯ ತೀವ್ರತೆಯಿಂದಾಗಿ, ಅಧಿಕಾರಸ್ಥರೂ ಸಹ ಆಕೆಯ ಅಲ್ಲಿನ ಉಪಸ್ಥಿತಿಯನ್ನು ದಶಕಗಳ ಕಾಲ ತಡೆಯಲಾಗು ವುದಿಲ್ಲ. ಆಕೆಯ ಮುಖ ಗೋಚರವಾಗದಿರುವುದಕ್ಕೂ, ಈ ವಿಡಿಯೊದ ಎರಡನೇ ಭಾಗದ ಚಿತ್ರೀಕರಣದ ಹೊತ್ತಿಗೆ ಆಕೆಯ ಮಾಯವಾಗುವುದಕ್ಕೂ ಅವಿನಾಭಾವ ಸಂಬಂಧವೊಂದು ಸಹಜವಾಗಿ ಏರ್ಪಡುತ್ತದೆ. ಮಹಾದೇವನ ಮಕ್ಕಳು ಎರಡು ಹೆಣಗಳನ್ನು ವಿಕ್ಟೋರಿಯ ಆಸ್ಪತ್ರೆಯಿಂದ ತಮ್ಮದೇ ಆದ 'ಅನಾಥ ಶವಗಳ' ವಾಹನದಲ್ಲಿ ಸ್ಮಶಾನದವರೆಗೂ ಸಾಗಿಸಿ, ಸಾಂಗೋ ಪಾಂಗವಾಗಿ ಹೂಳುವವರೆಗೂ ಕ್ಯಾಮರ ಎಲ್ಲ ಕ್ರಿಯೆಗಳಿಗೆ ಮೂಕಸಾಕ್ಷಿಯಾಗಿ ಅನುಸರಿಸುತ್ತದೆ. ನಗುವ ಕೂಟದ ಹಿಂದಿನ ನೋವು ಸತ್ಯನಾರಾಯಣರ ವಿವರದಲ್ಲಿ ಕಂಡೂಕಾಣದಂತೆ

ಮೂಡಿರುವುದಕ್ಕೆ ಕಾರಣ ತಾಂತಿಕ ಸೌಕರ್ಯದಿಂದಾಗಿ ಕೌಟುಂಬಿಕ ಒಡನಾಟವು ಮಾಯವಾಗುತ್ತಿರುವುದು. ವಿಡಿಯೊದಲ್ಲಿ ಇದು ವೇದ್ಯ.

ವಿಶೇಷವೆಂದರೆ ಈ ವಿಡಿಯೊಗಳಲ್ಲಿ ಸಯ್ಯದ್, ಮೇರಿ, ತ್ರಿವಿಕ್ರಮ ಮಹಾದೇವ ಮತ್ತು ಸತ್ಯನಾರಾಯಣ ಇವರೆಲ್ಲರು ಈಗಾಗಲೇ ತಮ್ಮ ವಿಕ್ಷಿಪ್ತ ಜೀವನಶೈಲಿಯಿಂದಾಗಿ ಸುದ್ದಿ ಮಾಧ್ಯಮಕ್ಕೆ ಆಹಾರವಾಗಿರುವಂತಹವರು. ಅಂದರೆ ಡಾಕ್ಯುಮೆಂಟರಿ ಭಾಷೆಗೆ ಒಗ್ಗಿಕೊಂಡವರು. ನಿಯತಕಾಲಿಕ ಪತ್ರಿಕೆಗಳು, ಟೆಲಿವಿಷನ್ನಿನ ಕಾರ್ಯಕ್ರಮಗಳು ಇನ್ನಿಲ್ಲದಂತೆ ಇವರುಗಳ ಬಗ್ಗೆ ಸುದ್ದಿಪ್ರಸಾರ ಮಾಡಿದ್ದರೂ ಸಹ, ಮಾಡಿರುವುದರಿಂದಲೇ ಸುದ್ದಿ ಎಂಬ ವ್ಯಾಖ್ಯೆಯ, ವ್ಯಾಕರಣದ ಪರಿಧಿಯ ಹೊರಗೆ ಇವರನ್ನು ಹಿಡಿದಿರಿಸುತ್ತದೆ ಈ ಪ್ರದರ್ಶನ. ಅವಕಾಶವಂಚಿತ ಗುಣವೇ ಮತ್ತೊಂದೆಡೆ ಹೊಸ ಜೀವನ ಮಾರ್ಗದ ಹುಡುಕಾಟಕ್ಕೆ ಅಡಿಗಲ್ಲಾಗುವ ಚೇತೋಹಾರಿ ಗುಣ ಈ ವಿಡಿಯೊಗಳಲ್ಲಿದೆ.

ಮಿಥ್ಯೆಗಳು ಮತ್ತು ಪುರಾಣಗಳು ಮಾತ್ರ ಹಲವು ರೂಪಗಳಲ್ಲಿ ಪುನರಾವರ್ತನೆಗೊಳ್ಳುವುದು. ಇಲ್ಲಿ ಈ ನಾಲ್ಕು ವ್ಯಕ್ತಿ(ತ್ವ)ಗಳನ್ನು ದಾಖಲೀಕರಣದ ಆತ್ಯಂತಿಕ ಚೌಕಟ್ಟನ್ನು ದಾಟಿಸಿ ಪುರಾಣದ ಪುನರಾವರ್ತನೆಯ ಗುಣಕ್ಕೆಳೆಸಿ, ಸೂಚಿಸುವ ಪ್ರಯತ್ನ ವಿಡಿಯೊಗಳಲ್ಲಿದೆ. ಅವರ ಕಥೆಗಳನ್ನು ಮತ್ತೆ ಮತ್ತೆ ಕೇಳಿದಂತೆನಿಸಿದರೂ, ವಿಡಿಯೊ ಮೂಡಿಸಲಾಗಿರುವ ಕೃತಕ ಬೆಳಕಿಲ್ಲದ, ಹೆಚ್ಚು ಸಂಸ್ಕರಣಕ್ಕೆ (ಎಡಿಟಿಂಗ್) ಎಡೆಮಾಡಿಕೊಡದ, ಎಂಪಿರಿಕಲ್ ಆದ ಹೊಸ ಹೊಸ ಹೊಳಹುಗಳು ಸಾಧ್ಯ. ಅದರ ಸೂಚಿ ಈ ಕೃತಿಗಳು.

ತನ್ಮೂಲಕ, ಪರ್ಯಾಯವಾಗಿ, ಕಲ್ಪನೆಯಿಂದ ವಾಸ್ತವದ ನೆಲೆಗೆ ಹೆಣ್ತನವೆಂಬ ಅಂಶವನ್ನು ದೃಶ್ಯಾತ್ಮಕವಾಗಿ ದಾಟಿಸುವ ಸಾಧ್ಯತೆಯನ್ನೂ ಹುಡುಕುತ್ತದೆ ಈ ವಿಡಿಯೊ ಸರಣಿ. ಇಂತಹ ನೇರವಲ್ಲದ ಪರ್ಯಾಯ ಮಾರ್ಗೋಪಾಯವನ್ನು ವರ್ಚ್ಯುಯಲ್ ಅಥವ ಸಿಮ್ಯುಲೇಷನ್



ಗುಣವೆನ್ನಬಹುದು. ಇಂದಿನ ತಾಂತ್ರಿಕ ಸಲಕರಣೆಗಳೆಲ್ಲವೂ ಆ ಗುಣಕ್ಕೆ ಪೂರಕ. ವಿಡಿಯೊದಂತಹ ವರ್ಚ್ಯುಯಲ್ (ನೈಜತೆಯ ತಾಂತ್ರಿಕ ಪುನರುತ್ಥಾನ) ಮಾಧ್ಯಮದ ಮೂಲಕ ಅಸ್ತಿತ್ವದಲ್ಲಿರುವ ತನ್ನ ಕುಲವನ್ನು ಹೋಲುವ (ನಗರೀಕೃತಗೊಂಡ ಹೆಣ್ಣು) ನಾಲ್ವರು ವ್ಯಕ್ತಿ(ತ್ವ)ಗಳ ಚಿತ್ರಣಗಳ ಮೂಲಕ ಸ್ತ್ರೀ ಎಂಬ (ಅ) ವಾಸ್ತವ, (ಆ) ಕಲ್ಪನೆ ಹಾಗೂ (ಇ) ಶೈಕ್ಷಣಿಕ ವಿಷಯಗಳ ಪರಿಧಿಗಳ ವಿಸ್ತರಣೆಯ, ಪರಸ್ಪರ ಒಡನಾಟದ ಅಭೀಪ್ಸೆಯೇ ಈ ಕೃತಿಸರಣಿ.

❑



# 'ಪ್ರಕೃತಿ' ಕಲಾವಿದೆ ಮುಕ್ತಾ ವೆಂಕಟೇಶನ್

• ಡಾ. ಚಂದ್ರಮತಿ ಸೋಂದಾ

**ಹೆ**ಣ್ಣುಮಕ್ಕಳು ಪೆನ್ನು ಹಿಡಿಯಲು ಮುಕ್ತ ಅವಕಾಶವಿಲ್ಲದ ಕಾಲದಲ್ಲಿ ಕುಂಚ ಹಿಡಿಯುವುದು ಊಹೆಗೂ ನಿಲುಕದ ಸಂಗತಿ. ಮಗಳು ಕುಂಚ ಹಿಡಿದು ತಾನು ಗ್ರಹಿಸಿದ 'ಪ್ರಕೃತಿ'ಯನ್ನು ಅಭಿವ್ಯಕ್ತಿಸಲು ಅವಕಾಶ ನೀಡಿದ ತಂದೆ ಮಹದೇವಯ್ಯ ಅವರ ಪ್ರೋತ್ಸಾಹ ಇಲ್ಲದಿದ್ದರೆ ಮಗಳು ಕಲಾವಿದೆಯಾಗಲು ಸಾಧ್ಯವಾಗುತ್ತಿರಲಿಲ್ಲ. ಹದಿನೈದನೆಯ ವರ್ಷದಲ್ಲಿ ಚಿತ್ರಕಲೆಯ ಬಗ್ಗೆ ಮೂಡಿದ ಆಸಕ್ತಿಯನ್ನು ತಮ್ಮ ನೂರೊಂದನೆಯ ವರ್ಷದಲ್ಲಿಯೂ ಉಳಿಸಿಕೊಂಡಿದ್ದ ಅಪರೂಪದ ಕಲಾವಿದೆ ಮುಕ್ತಾ ವಂಕಟೇಶನ್.

ಮಾಧವಯ್ಯ-ಮೀನಾಕ್ಷಿ ದಂಪತಿಗಳ ಮಗಳಾಗಿ 1902ರಲ್ಲಿ ತಮಿಳು ನಾಡಿನಲ್ಲಿ ಜನಿಸಿದ ಮುಕ್ತಾ ಅವರ ಹುಟ್ಟುಹೆಸರು ಮುತ್ತಮ್ಮ. ಮದುವೆಯಾದ ಮೇಲೆ ಮಾವ ಮಹದೇವ ಶಾಸ್ತ್ರಿಯವರು ಮುತ್ತಮ್ಮನ ಹೆಸರನ್ನು ಮುಕ್ತ ಎನ್ನುವುದಾಗಿ ಬದಲಿಸಿದರು. ಮುಕ್ತ ಅವರ ತಂದೆ ಮಹದೇವಯ್ಯನವರದು ಎಂಟು ಮಕ್ಕಳ ತುಂಬು ಸಂಸಾರ. ಆರ್ಥಿಕವಾಗಿ ಸಾಕಷ್ಟು ಅನುಕೂಲವಿಲ್ಲದಿದ್ದರೂ ಗಂಡು ಹೆಣ್ಣು ಎನ್ನುವ ಭೇದವಿಲ್ಲದೆ ಎಲ್ಲ ಮಕ್ಕಳಿಗೂ ತಮ್ಮ ಕೈಲಾದಷ್ಟು ಶಿಕ್ಷಣ ಕೊಡಿಸಿದರು. ಮದ್ರಾಸಿನಲ್ಲಿ ಇಂಟರ್ ಮೀಡಿಯಟ್ ಮುಗಿಸಿ ಆನರ್ಸ್‌ಗೆ ಸೇರಿದ್ದ ಮುಕ್ತಾ ಅವರಿಗೆ ಮೈಸೂರು ರಾಜ್ಯ ರೈಲ್ವೆ ಮೇನೇಜರ್ ವೆಂಕಟೇಶನ್ ಜೊತೆ ಮದುವೆಯಾಗಿ ಕಾಲೇಜು ಶಿಕ್ಷಣ ಮುಂದುವರಿಸಲು ಆಗಲಿಲ್ಲ. ಔಪಚಾರಿಕ ಶಿಕ್ಷಣ ನಿಂತುಹೋದರೂ ತಮ್ಮ ಕಲಾಸಕ್ತಿಯನ್ನು

### ಕಲಾವಿದೆ ಮುಕ್ತಾ ವೆಂಕಟೇಶ್

ಕ್ಷಣಕಾಲ ಅರಳಿ, ನೋಡುಗರಿಗೆ ಆನಂದವಿತ್ತು ಬಾಡಿಹೋಗುವ ಬಗೆ ಬಗೆಯ ಹೂವುಗಳನ್ನು ಜಲವರ್ಣ ಚಿತ್ರಗಳಲ್ಲಿ ಹಿಡಿದಿಟ್ಟು ಶಾಶ್ವತಗೊಳಿಸಿದ ಅಪರೂಪದ ಚಿತ್ರಕಲಾವಿದೆ ಮುಕ್ತಾ ವೆಂಕಟೇಶ್.

ಬಾಲ್ಯದಿಂದಲೂ ಕುತೂಹಲ ಹುಟ್ಟಿಸುವ ಎಲ್ಲ ವಸ್ತುಗಳ ಚಿತ್ರ ಬಿಡಿಸುತ್ತಿದ್ದ ಈ ಮಗಳ ಕಲಾಸಕ್ತಿ ಗುರುತಿಸಿದ ತಂದೆ, Madras School of Arts ಚಿತ್ರಕಲಾ ಶಾಲೆಯ ಶಿಕ್ಷಕರಾಗಿದ್ದ Mr. Hope ಅವರಿಂದ ಮಗಳಿಗೆ ಕಲಾಶಿಕ್ಷಣ ಕೊಡಿಸಿದರು.

ಮದುವೆ ಆದನಂತರ ಮುಕ್ತಾ, ತಮ್ಮ ಪತಿಯೊಂದಿಗೆ ಬೆಂಗಳೂರಿಗೆ ಬಂದು ಕೆಲಕಾಲ ನೆಲೆಸಿದ್ದರು. ಆ ಅವಧಿಯಲ್ಲಿ ಬೆಂಗಳೂರಿನ ಮಹಿಳಾ ಸಮಾಜದಲ್ಲಿ ಮಹಿಳೆಯರ ಶಿಕ್ಷಣಕ್ಕಾಗಿ ಶ್ರಮಿಸಿದರು. 1922ರಲ್ಲಿ ಮೈಸೂರಿಗೆ ಹೋಗಿ ನೆಲೆಸಿದರು.

1931-32ರಲ್ಲಿ ಪತಿಯೊಂದಿಗೆ ಇಂಗ್ಲೆಂಡ್ ಹಾಗೂ ಯೂರೋಪಿಗೆ ಪ್ರವಾಸ ಹೋಗಿದ್ದಾಗ ಬ್ರಿಟನ್ನಿನ ಖ್ಯಾತ ಚಿತ್ರಕಾರ Xavier Willis ಅವರಿಂದ ಲ್ಯಾಂಡ್‌ಸ್ಕೇಪಿಂಗ್ ಕಲೆಯಲ್ಲಿ ತರಬೇತಿ ಪಡೆದರು. ಲಿಯೋ ನಾರ್ಡೋ ಡ ವಿಂಚಿ, ವ್ಯಾನ್ ಗೋ ಅವರ ಚಿತ್ರಗಳ ಮ್ಯೂಸಿಯಂಗಳನ್ನು ಸಂದರ್ಶಿಸಿದ್ದರು. ಪ್ಯಾರಿಸ್ ನಗರದ ವಿಶ್ವವಿಖ್ಯಾತ Louvre ಮ್ಯೂಸಿಯಂನಲ್ಲಿ ಮಹಾನ್ ಕಲಾವಿದರ ಚಿತ್ರವೀಕ್ಷಣೆಯಿಂದ ತಮ್ಮ ಕಲಾಜ್ಞಾನವನ್ನು ವಿಸ್ತರಿಸಿಕೊಂಡರು.

"When they are in bloom, every body is attracted towards them. Nobody ever bothers to save the withering flowers" ಎಂದು ಅವರು ಕಳಕಳಿಯಿಂದ, ಅಂತಹ ಪುಷ್ಪಗಳ ಚಿತ್ರಣಕ್ಕೇ ತಮ್ಮ ಪ್ರತಿಭೆ ಹರಿಸಿದ್ದಾರೆ.

ಮುಕ್ತಾ ಅವರು ನೂರುಕಾಲ ಬಾಳಿದವರು. ಈ ನೂರರ ಅಮೃತ ಘಳಿಗೆಯಲ್ಲೇ ಅಂಥ ಕಲಾವಿದೆಯ ಶೋಧಮಾಡಿದ ಕೀರ್ತಿ ರಾಮ್‌ಸನ್ಸ್ ಕಲಾ ಪ್ರತಿಷ್ಠಾನದ್ದು. ಮುಕ್ತಾ ಅವರ ಬಗ್ಗೆ ವಿವರಗಳು, ಅವರು ಚಿತ್ರಿಸಿದ ಚಿತ್ರಗಳು ಇರುವ ಅಪರೂಪದ ಕ್ಯಾಲೆಂಡರ್ ಅನ್ನು ಪ್ರತಿಷ್ಠಾನ ಪ್ರಕಟಿಸಿದ್ದರಿಂದ ಕಲಾಸಕ್ತರ ಮನೆ ಮನಗಳಲ್ಲಿ ಮುಕ್ತಾ ತುಂಬಿಕೊಂಡರು. ಇವೆಲ್ಲಕ್ಕೂ ಅನುವು ಮಾಡಿಕೊಟ್ಟವರು ಹಿರಿಯ ಪತ್ರಕರ್ತ ಎಂ.ಬಿ.ಸಿಂಗ್. ರುಕ್ಮಿಣಿ ಅರುಂಡೇಲ್, ಕಮಲಾದೇವಿ ಚಟ್ಟೋಪಾಧ್ಯಾಯರಂಥ ಸಾಧಕರ ಆಪ್ತ ಗೆಳತಿ ಮುಕ್ತಾರನ್ನು ಮಾನಸದ ಓದುಗರ ಸನಿಹಕ್ಕೆ ತಂದ ಚಂದ್ರಮತಿ ಸೋಂದಾ, ಮುಕ್ತಾ ಅವರ ಮಗಳು ಗಿರಿಜಾ ಮಾಧವನ್, ಎಂ.ಬಿ. ಸಿಂಗ್, ರಾಮ್‌ಸನ್ಸ್ ಕಲಾಪ್ರತಿಷ್ಠಾನಗಳಿಗೆ ಕೃತಜ್ಞತೆಗಳು.

-ಸಂ.

ಬದುಕಿನುದ್ದಕ್ಕೂ ಉಳಿಸಿಕೊಂಡು ಬಂದರು. ಮುಕ್ತಾ ಅವರು ಹದಿನೈದು ವರ್ಷದವರಿದ್ದಾಗಲೇ ಅವರಿಗೆ ಚಿತ್ರಕಲೆಯ ಬಗೆಗಿದ್ದ ಆಸಕ್ತಿಯನ್ನು ಗಮನಿಸಿದ ತಂದೆಯವರು ಮಿಸ್ ಪೀಟರ್ಸ್ ಅವರಿಂದ ಮಾರ್ಗದರ್ಶನ ಮಾಡಿಸಿದರು. ಅಲ್ಲದೆ, ತಂದೆ ಮಾಧವಯ್ಯ ಇಂಗ್ಲಿಷ್ ಮತ್ತು ತಮಿಳು ಭಾಷೆಗಳಲ್ಲಿ ಸೃಜನಶೀಲ ಬರಹಗಾರರಾಗಿದ್ದರು. ಮನೆಯಲ್ಲಿನ ಸಾಹಿತ್ಯಿಕ ವಾತಾವರಣ ಮುಕ್ತಾ ಅವರ ಮೇಲೂ ಪ್ರಭಾವ ಬೀರಿತ್ತು. ಯೇಟ್ಸ್, ಎಲಿಯಟ್ ಮೊದಲಾದವರ ಸಾಹಿತ್ಯ ಕೃತಿಗಳನ್ನು ಓದುತ್ತಿದ್ದರು. 1933ರಲ್ಲಿ ಪತಿಯೊಂದಿಗೆ ಇಂಗ್ಲೆಂಡಿಗೆ ಹೋದ ಮುಕ್ತಾ ಅವರು ಅಲ್ಲಿ ಬ್ರಿಟನ್ನಿನ ಕಲಾವಿದ ಕ್ಸೇವಿಯರ್ ವಿಲ್ಲಿಸ್ ಅವರಿಂದ ಕಲಾ ತರಬೇತಿ ಪಡೆದರು.

ಮುಕ್ತಾ ವಂಕಟೇಶ್ ಸಾವಿರಾರು ಚಿತ್ರಗಳನ್ನು ರಚಿಸಿದ್ದರೂ ಅಲ್ಲಿ ಒಂದಾದರೂ ಮಾನವ ಪ್ರಕೃತಿಯನ್ನು (portrait) ಕಾಣಲಾರೆವು. ಪ್ರಾರಂಭದ ಕಾಲದಿಂದ ಕೊನೆಯವರೆಗೆ ಅವರು ಚಿತ್ರಿಸುತ್ತಿದ್ದುದೇ 'ಪ್ರಕೃತಿ'ಯನ್ನು ಎನ್ನುವುದಾಗಿ ಕಲಾವಿದೆಯೂ ಆಗಿರುವ ಅವರ ಮಗಳು ಗಿರಿಜಾ ಮಾಧವನ್ ಹೇಳುತ್ತಾರೆ. ಅವರ ತೋಟದ ಹೂವುಗಳು, ಸುತ್ತಮುತ್ತಣ ಹಸಿರಿನ ನೋಟಗಳೇ ಅವರಿಗೆ ರೂಪದರ್ಶಿಗಳು. ಪ್ರಕೃತಿದರ್ಶನ ಅವರ ಚಿತ್ರಣದ ವಿಶಿಷ್ಟತೆ. ಹೂವು, ಗಿಡ, ಬಳ್ಳಿ ಯಾವುದನ್ನೇ ಚಿತ್ರಿಸಲಿ, ಅದರ ಜೀವನ ಚಕ್ರವನ್ನು ಹಿಡಿದಿಡುತ್ತಾರೆ. ಕಾಂಡ, ರೆಂಬೆ, ಚಿಗುರು, ದಟ್ಟ ಹಸಿರಿನ ಎಲೆಗಳು, ಹಣ್ಣಾದ, ಉದುರಲಿರುವ ಎಲೆಗಳು, ಮೊಗ್ಗು, ಬಿರಿಯಲಿರುವ ಮೊಗ್ಗು, ಅರಳಿ ನಳನಳಿಸುವ ಹೂವು ಹೀಗೆ ಜೀವನಚಕ್ರವನ್ನು ಅನಾವರಣಗೊಳಿಸುತ್ತಾರೆ. ಮುಕ್ತಾ ಅವರು ರಸ್ತೆಯಲ್ಲಿ ಹೋಗುವಾಗ ಯಾವುದಾದರೂ ಹೂವು, ಚಿಗುರು ಅವರನ್ನು ಆಕರ್ಷಿಸಿದರೆ ತಕ್ಷಣ ಅದನ್ನು ಕೇಳಿ ತಂದು ಅದನ್ನು ಕುಂಚದಲ್ಲಿ ಅರಳಿಸುವುದು ಅವರ ರೀತಿ ಎನ್ನುತ್ತಾರೆ ಗಿರಿಜಾ. ಎದುರಿರುವ ಮಾದರಿಗೆ ತಮ್ಮ ಕಲಾಕೌಶಲ್ಯವನ್ನು ಬೆರಸಿಯೂ ಅದನ್ನು ಸಹಜವಾಗಿ ಕಾಣುವಂತೆ ಮಾಡುವ ಕಲಾ ನೈಪುಣ್ಯ ಅವರಿಗೆ ಸಿದ್ಧಿಸಿತ್ತು. ಅವರ ಕುಂಚದಿಂದ ರೂಪುತಳೆದ ಲ್ಯಾಂಡ್‌ಸ್ಕೇಪ್‌ಗಳು ಅವರ ಕಲಾಕುಶಲತೆಯನ್ನು ಕಾಣಿಸುತ್ತವೆ. ಚಿಕ್ಕ ಸಂಗತಿಗಳನ್ನು ಕುಸುರಿಸಿರುವ ಅವರ ಕಲಾಶ್ರದ್ಧೆ ಅಲ್ಲಿ ಎದ್ದು ಕಾಣುತ್ತದೆ.

ಮುಕ್ತಾ ಅವರು ಪ್ರಕೃತಿಯೊಂದನ್ನೇ ತಮ್ಮ ಕಲಾಮಾಧ್ಯಮವಾಗಿಸಿ ಕೊಂಡಂತೆ ಎಲ್ಲ ಚಿತ್ರಗಳನ್ನೂ ಜಲವರ್ಣದಲ್ಲಿಯೇ ಬಿಡಿಸಿರುವುದು ಅವರ ವಿಶಿಷ್ಟತೆ. ಅಳಿಲು ಕೂದಲಿನ ಬ್ರಶ್ ಬಳಸುತ್ತಿದ್ದ ಅವರು ಆ ಬ್ರಶ್ ಅಲಭ್ಯವಾದಾಗ ಒಂಟೆಯ ಕೂದಲಿನ ಬ್ರಶ್ ಬಳಸಿದರು. ಮುಕ್ತಾ


ಕುಟುಂಬರೊಂದಿಗೆ ಕಲಾವಿದೆ ಮುಕ್ತಾ

ಅವರು ಯಾವತ್ತೂ ಪೆನ್ಸಿಲ್ ಬಳಸುತ್ತಿರಲಿಲ್ಲ. ಮೊದಲು ತಿಳಿ ಬಣ್ಣದಲ್ಲಿ ಸ್ಕೆಚ್ ಮಾಡಿಕೊಂಡು ಆಮೇಲೆ ಪೂರ್ತಿಗೊಳಿಸುವುದು ಅವರ ರೀತಿ.

ಸುಮಾರು ಎಂಟು ದಶಕಕ್ಕೂ ಅಧಿಕ ಕಾಲ ಅವರು ಮೈಸೂರಿನ ನಿವಾಸಿಯಾಗಿದ್ದರೂ ಮುಕ್ತಾ ವೆಂಕಟೇಶನ್ ಎನ್ನುವ ಕಲಾವಿದೆ ಇಲ್ಲಿಯೇ ಇದ್ದಾರೆ ಎನ್ನುವ ವಿಷಯ ಮೈಸೂರಿಗರಿಗೆ ಗೊತ್ತಿರಲಿಲ್ಲ. ಅವರು ನಿಜವಾದ ಅರ್ಥದಲ್ಲಿ ಎಲೆಮರೆಯ ಕಾಯಂತೆ ಇದ್ದರು. ಒಮ್ಮೆಯೂ ಚಿತ್ರಕಲಾ ಪ್ರದರ್ಶನ ಏರ್ಪಡಿಸಲಿಲ್ಲ. ಬಿಡಿಸಿರುವ ಚಿತ್ರಗಳನ್ನು ಮಾರಾಟ ಮಾಡಲಿಲ್ಲ. ಹತ್ತಿರದ ಸ್ನೇಹಿತರಿಗೆ ಬಳಗಕ್ಕೆ ಉಡುಗೊರೆಯಾಗಿ ನೀಡುತ್ತಿದ್ದರೇ ವಿನಾ ತಮ್ಮ ಕಲಾಕೌಶಲ್ಯವನ್ನು ವಾಣಿಜ್ಯದ ಉದ್ದೇಶಕ್ಕೆ ಬಳಸಲೇ ಇಲ್ಲ. ಅವರ ಸುದೀರ್ಘ ಬದುಕಿನಲ್ಲಿ ಎರಡೇ ಬಾರಿ ಕಲಾಪ್ರದರ್ಶನ ನಡೆದುದು. ಒಮ್ಮೆ ಟೋಕಿಯೋದಲ್ಲಿ ಇನ್ನೊಮ್ಮೆ ದೆಹಲಿಯಲ್ಲಿ. ದೆಹಲಿ ಪ್ರದರ್ಶನಕ್ಕೆ ವಿಶೇಷತೆ ಇದೆ. ಮುಕ್ತಾ ಅವರ ಚಿತ್ರಗಳಲ್ಲದೆ ಮಗಳು ಗಿರಿಜಾ ಮಾಧವನ್ ಅವರ ಕುಂಚದಲ್ಲಿ ಅರಳಿರುವ ಚಿತ್ರಗಳೂ ಅಲ್ಲಿ ಪ್ರದರ್ಶಿತಗೊಂಡವು. ತಾಯಿಯಂತೆ ಮಗಳೂ ಪ್ರದರ್ಶನದಿಂದ ದೂರವೇ ಇದ್ದಾರೆ. ಮುಕ್ತಾ ಅವರ ಕಲಾಜೀವನವನ್ನು ಗಮನಿಸಿದರೆ ಅವರು ತಮ್ಮ ತೃಪ್ತಿಗಾಗಿ ಪ್ರಕೃತಿಯನ್ನು ಚಿತ್ರಿಸುತ್ತಿದ್ದರು ಎನಿಸುತ್ತದೆ. ಹಾಗಾಗಿಯೇ ಅವರು ತಮ್ಮ ಜೀವನದ ಕೊನೆಯವರೆಗೂ ಚಿತ್ರಕಲೆಯಲ್ಲಿ ತೊಡಗಿಕೊಂಡಿದ್ದಿರಬೇಕು.

ಸಾಹಿತ್ಯ, ಕಲೆಗಳಲ್ಲಿ ಆಸಕ್ತಿ ಇರುವ ಮಹಿಳೆಗೆ ಸಮಯದ ಹೊಂದಾಣಿಕೆಯ ಪ್ರಶ್ನೆ ಎದುರಾಗುತ್ತದೆ. ಆದರೆ ಮುಕ್ತಾ ಅವರಿಗೆ ಆ ತೊಂದರೆ ಇರಲಿಲ್ಲ. ಚಿಕ್ಕಂದಿನಲ್ಲಿ ತಂದೆಯ ಪ್ರೋತ್ಸಾಹವಿದ್ದುದರಿಂದ ಅಭಿವ್ಯಕ್ತಿಗೆ ಅಡ್ಡಿ ಎದುರಾಗಲಿಲ್ಲ. ವಿವಾಹದನಂತರ ವೆಂಕಟೇಶನ್ ಅವರು ಮಡದಿಯ ಕಲಾಸಕ್ತಿಯನ್ನು ಗೌರವಿಸಿ ಪ್ರೋತ್ಸಾಹ ನೀಡಿದರು. ಎರಡೇ ಹೆಣ್ಣುಮಕ್ಕಳಿದ್ದು ಚಿಕ್ಕ ಕುಟುಂಬವಾದ್ದರಿಂದ ಸಮಯಕ್ಕಾಗಿ ಹಳಹಳಿಸುವ ಸನ್ನಿವೇಶ ಎದುರಾಗಲಿಲ್ಲ. ಅಲ್ಲದೆ, ಮುಕ್ತಾ ಅವರಿಗೆ ಪೂಜೆ, ವ್ರತಾಚರಣೆಗಳಲ್ಲಿ ಅಷ್ಟಾಗಿ ನಂಬಿಕೆ ಇಲ್ಲದ್ದರಿಂದ ಬಿಡುವಿನ ವೇಳೆ ಸಿಗುತ್ತಿತ್ತು. ಕೆಲವು ಕಾಲ ಸುತ್ತಲಿನ ಮಕ್ಕಳಿಗೆ ಪಾಠ ಹೇಳುತ್ತಿದ್ದರು. ಬೈಬಲ್, ಹಿಂದೂ ಧರ್ಮಗ್ರಂಥಗಳನ್ನು ಓದಿ ತಿಳಿದಿದ್ದರು. ವಾರಿಸುದಾರಿತ್ವಕ್ಕೆ, ಮೋಕ್ಷಕ್ಕೆ ಗಂಡುಮಕ್ಕಳು ಇರಲೇಬೇಕು ಎನ್ನುವ ಸಾಮಾಜಿಕ ನಂಬಿಕೆಗೆ ಅವರು ಬೆಲೆ ಕೊಡಲಿಲ್ಲ. ಹಿರಿಮಗಳು ಮಾಧವಿ ಹುಟ್ಟಿ 14ವರ್ಷಗಳನಂತರ ಎರಡನೆಯ ಮಗಳು ಗಿರಿಜಾ ಹುಟ್ಟಿದ್ದು. ಆ ನಡುವಿನ ಅವಧಿಯಲ್ಲಿ ಒಬ್ಬಳೇ ಮಗಳು ಎಂದು ಅವರು ಕೊರಗಲೂ ಇಲ್ಲ; ಗಿರಿಜಾ ಹುಟ್ಟಿದಾಗ ಎರಡನೆಯದೂ ಹೆಣ್ಣು ಎಂದು ದುಃಖಿಸಲೂ ಇಲ್ಲ. ಮೊದಲಿನಿಂದಲೂ ದೊರೆತ ಅವಕಾಶದಿಂದಾಗಿ ಅವರಿಗೆ ಹೆಣ್ಣು ಎನ್ನುವ ಕೀಳರಿಮೆ ಬೆಳೆಯದೆ ಇದ್ದುದು ಇದಕ್ಕೆ ಕಾರಣವಿರಬಹುದು.

ಕೃಷ್ಣಸ್ವಾಮಿ, ಶುದ್ಧೋದನ, ಸುಬ್ಬುಕೃಷ್ಣ ಮುಂತಾದ ಕಲಾವಿದರ ಸಾಹಚರ್ಯ ಕಲಾ ಬೆಳವಣಿಗೆಗೆ ಸಹಕಾರಿಯಾಯಿತು. ಟಿ.ಪಿ.ಕೈಲಾಸಂ, ಅ.ನ.ಕೃ, ಯು.ಆರ್.ಅನಂತಮೂರ್ತಿ ಅಂಥವರ ಸಾಹಿತ್ಯಿಕ ಒಡನಾಟ ಅವರ ಸಾಹಿತ್ಯಾಸಕ್ತಿಗೆ ನೀರೆರೆಯಿತು. ಕಲಾ ಜೀವನದಲ್ಲಿನ ಶ್ರದ್ಧೆ, ಶಿಸ್ತುಬದ್ಧ ಜೀವನ ಅವರ ಸುದೀರ್ಘ ಬದುಕಿಗೆ ಕಾರಣವಿರಬಹುದು ಎನ್ನುವುದು ಮಗಳು ಗಿರಿಜಾ ಅವರ ಅನಿಸಿಕೆ. ನೂರೊಂದು ವರ್ಷದವರೆಗೂ ಕಲಾಸಕ್ತಿಯನ್ನು ಉಳಿಸಿಕೊಂಡು ಬದುಕಿದ ಮುಕ್ತಾ ವೆಂಕಟೇಶನ್ ಹುಟ್ಟಿದ ದಿನ ಇದೇ ಬರುವ ಮೇ 17ರಂದು. ಈ ಸಂದರ್ಭದಲ್ಲಿ ಆ ಹಿರಿಯ ಚೇತನಕ್ಕೆ ಇದೊಂದು ನುಡಿನಮನ. ❑

# ಮುಕ್ತಾ ವೆಂಕಟೇಶನ್ ಅವರ ಕೆಲವು ಕಲಾಕೃತಿಗಳು













*ಚಿತ್ರಕೃಪೆ: ಗಿರಿಜಾ ಮಾಧವನ್*

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2007-09

## ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ಕ್ರಾಸ್, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018